ಶ್ರೀ ಶೇಷಾಚಲ ಗ್ರಂಥಮಾಲೆ ಆನಂದವನ

# ದಳವಾಯಿ ಸಾತನಾಮಿ



ವಸುದೇವ ಆಂಗಿರಸ



1940



೪ ಆಣೆ

# ದಳವಾಯಿ ಸಾತನಾಮಿ

(ಐತಿಹಾಸಿಕ ಕಥೆ)

ಲೇಖಕ:—

ವಾ. ದೇ. ಆಂಗೀರಸ.

ಪ್ರಕಾಶಕ:—

ಯು. ಗು. ಕುಲಕರ್ಣಿ,

ಸಂಪಾದಕ, ಸ. ಚ. ಆನಂದವನ-ಅಗಡಿ.

೧೯೪೦ ಸಪ್ಟಂಬರ

ಬೆಲೆ ೪ ಆಣೆ

# ನಿವೇದನೆ

....ಮುಕ್ತಿ ದೊರಕುವದೇ ವಿವೇಕ ವಿರಕ್ತಿ ಶಮ ದಮ

ಗುರುಪದಾಂಬುಜ...

ಎಂಬ ಅನುಭವಿಕರ ಅಮೃತ ವಾಕ್ಯದಂತೆ,

ಈ ಚಿಕ್ಕ ಕಥಾನಕವನ್ನು

ಸದ್ಗುರುವಿನ

ಚರಣ ತಲದಲ್ಲಿ

ಭಕ್ತಿಯಿಂದಲೂ ಆನಂದದಿಂದಲೂ

ನಿವೇದಿಸಿರುವೆನು.

ಆಂಗೀರಸಕುಲದ ವಾಸುದೇವಶರ್ಮ

---



ಪ್ರಿಂಟರ:—ಭಿ. ಪ. ಕಾಳೆ, ಶ್ರೀ ಶೇಷಾಚಲ ಪ್ರೆಸ್ಸ ಆನಂದವನ-ಅಗಡಿ

# ದಳವಾಯಿ ಸಾತನಾಮಿ.

## ಪ್ರೇಮದ ಕಂಟಕವು.

"ಯದುಬಾಲೆ, ಈ ವನಶ್ರೀಯ ಸೊಬಗನ್ನು ನೋಡು, ಎಷ್ಟು ಆನಂದದಾಯಕವಾಗಿದೆ!"

"ಇದರಲ್ಲೇನು ವಿಶೇಷವು? ವಸಂತಋತುವಿನಲ್ಲಿ ತರುಲತೆಗಳ ಆವಾಸವು ಆನಂದದಾಯಕವಾಗಿರುವುದು ಸ್ವಾಭಾವಿಕವೇ ಇರುತ್ತದೆ."

"ನಿನ್ನ ಎಷ್ಟ್ಕತನದ ಮಾತುಗಳನ್ನು ಸಾಕುಮಾಡು. ವಸಂತಋತುವಿನಲ್ಲಿ ತರುಲತೆಗಳ ಆವಾಸವು ಆನಂದದಾಯಕವಾಗಿರುವುದು ಸ್ವಾಭಾವಿಕವೇ ಆಗಿದ್ದರೂ, ಅನೇಕರು ಆ ಆನಂದವನ್ನು ಅನುಭವಿಸುತ್ತಿರುವದಿಲ್ಲ. ಪ್ರಕೃತಿ ಸೌಂದರ್ಯೋಪಾಸನೆಯು ಅನೇಕರಿಗೆ ಬೇಡವಾಗಿರುತ್ತದೆ. ಪ್ರಕೃತಿಯ ನೈಸರ್ಗಿಕ ಶೋಭೆಯು ಅಜ್ಞರನ್ನು ಸಂತೋಷಗೊಳಿಸಲಾರದು. ನೀನೂ ಈದ ಸೃಷ್ಟಿವೈಚಿತ್ರ್ಯದ ಆನಂದಕ್ಕೆ ಎರವಾಗಿರುವೆಯೆಂದು ನನ್ನ ಮನಸಾಕ್ಷಿಯಿಂದ ನಿನ್ನನ್ನು ಎಚ್ಚರಿಸುವೆನು. ಯದು, ಈ ನನ್ನ ಆನಂದದಲ್ಲಿ ನೀನು ಭಾಗಿಯಾಗುವದಿಲ್ಲವೇನು?"

"ನಾರಾಯಣದೇವ, ಯಾವದೊಂದು ಸ್ವಾರ್ಥಬುದ್ಧಿಯಿಂದ ನಿಮ್ಮ ಆನಂದದಲ್ಲಿ ಭಾಗಿಯಾಗುವದು ಅಧರ್ಮವಾಗುವದು. ತರುಣಯುವತಿಯರು ತಮ್ಮ ಪತಿಯ ಆನಂದದಲ್ಲಿಯೂ ದುಃಖದಲ್ಲಿಯೂ ಭಾಗಿಯಾಗಬೇಕು. ತಂದೆಯವರು ನಮ್ಮಿಬ್ಬರು ಅಕ್ಕತಂಗಿಯರಲ್ಲಿ ಯಾರೊಬ್ಬಳನ್ನಾದರೂ ನಿಮಗೆ ಕೊಡಬೇಕೆಂದು ಮನಃಪೂರ್ವಕವಾಗಿ ಇಚ್ಛಿಸಿದ್ದರು; ಆದರೆ ಈಗ್ಗೆ ಕೆಲವು ದಿವಸಗಳ ಹಿಂದೆ ಅಕ್ಕನು ಸೋಮಕವನಕ್ಕೆ ಹೋದವಳು ಹಿಂದಿರುಗಿ ಬರಲೇ ಇಲ್ಲ. ರಾತ್ರಿಯೆಲ್ಲಾ ಹುಡುಕಿದ್ದಾಯಿತು. ಮಾರನೆಯ ದಿನವೂ ಹುಡುಕಿದೆವು. ಏನೂ ಪತ್ತೆಹತ್ತಲಿಲ್ಲ. ಕೊನೆಗೆ ಅವಳು ಯಾವದೊಂದು ಹಿಂಸ್ರಪಶುವಿನ ಉದರಸ್ಥಾನಕ್ಕೆ ಗುರಿಯಾಗಿರುವುದೇ ನಿಜವೆಂದು ಎಲ್ಲರೂ ಹೇಳತೊಡಗಿದರು. ಮಾಧವಿಯು ತೀರಿ ಹೋದಾಗಿನಿಂದ ಅಪ್ಪನು ಯಾವಾಗಲೂ ಮೌನವಾಗಿಯೇ ಇರುವನು. ಅಕ್ಕನನ್ನು ನಿಮಗೆ ಕೊಡಬೇಕೆಂದು ಅಪ್ಪನ ಆಲೋಚನೆಯಿತ್ತು; ಆದರೆ ಈಗ ಆ ಆಲೋಚನೆಯಿಂದ ಉಪಯೋಗವೇನಿದೆ? ಈಗ ನನ್ನನ್ನೇ ನಿಮಗೆ ಕೊಡಬೇಕೆಂದು ಮಾಡಿರುವನು. ನನ್ನ ಆಶೆಯಾದರೂ ಅದೇ ಬಗೆಯಾಗಿದೆ. ನನ್ನೀ ಆಶೆಯು ನೆರವೇರಿದರೆ, ಕೃತಾರ್ಥಳಾಗುವೆನು."

"ಯದು, ನೀನು ನನ್ನಲ್ಲಿ ಈ ವಿಧವಾದ ದೈನ್ಯತೆಯನ್ನೇಕೆ ವ್ಯಕ್ತಪಡಿಸುವೆ? ಸ್ತ್ರೀಯರೇ ಮನೆಯ ಮಂಗಲಮಯ ಮೂರ್ತಿಯರಿರುವರು. ಅಂಥ ಅನುರೂಪಳಾದ ಸ್ತ್ರೀಯನ್ನು ಹೊಂದಿ ಪುರುಷನು ಐಹಿಕಾಮುಷ್ಮಿಕದ ಫಲವನ್ನು ಹೊಂದುವನು. ವೈಷಯಿಕ ವ್ಯಾಮೋಹಕ್ಕಾಗಿ ವನಿತಾರತ್ನವನ್ನು ಸಂಪಾದಿಸುವದು ಪ್ರಾಜ್ಞರ ದೃಷ್ಟಿಯಿಂದ ಪಶುತುಲ್ಯವಾಗಿರುವದು. ಧರ್ಮವೀರರನ್ನು ಪಡೆದ ಧರ್ಮತಾಯಿಗಳ ಧರ್ಮಪ್ರಭಾವದಿಂದಲೇ ಪ್ರಪಂಚದ ಆಗು-ಹೋಗುಗಳು ನಡೆಯುವವು. ಪುರುಷರ ಮಾನದಿಂದ ಸ್ತ್ರೀಯರು ಅಧರ್ಮಿಗಳೂ ಕಾಮುಕಿಯರೂ ಇರುವದಿಲ್ಲ. ಅಂದಮೇಲೆ ನೀನು ನನ್ನನ್ನು ಇಷ್ಟೇಕೆ ಯಾಚಿಸಬೇಕು?"

"ನಾರಾಯಣದೇವ! ನಿಜವಾದ ಮಾತನಾಡಿದಿರಿ. ಪುರುಷರ ಈ ಬಾಯಿಮಾತುಗಳು ಕಾರ್ಯರೂಪಕ್ಕಿಳಿದಿದ್ದರೆ ಸ್ತ್ರೀಯರ ಅಭ್ಯುದಯಕ್ಕೆ ಮೇರೆಯಿರಲಿಲ್ಲ. ಹೆಚ್ಚು ದೂರವೇಕೆ? ವಿವಾಹದಲ್ಲಿ ಕಾಣುವದಿಲ್ಲವೆ? ವರನು ಸಣ್ಣ-ಪುಟ್ಟ ಗಂಟುಗಳೊಡನೆ ಕಾಶೀಯಾತ್ರೆಗೆಂದು ಹೊರಟಾಗ ವರನನ್ನು ಲಗ್ನಕ್ಕೆ ಬರಬೇಕೆಂದು ಅಂಗಾಲಾಚಿ ಕರೆಯುವವರು ವಧುವಿನ ಕಡೆಯವರಲ್ಲವೆ? ವರನ ಕಡೆಯವರಿಗೆ ನೂತನ ಬಿಡದಿ, ವಿವಿಧ ವಾದ್ಯಗಳು, ಬರಹೋಗಲಿಕ್ಕೆ ವಾಹನ ಮೊದಲಾದ ಸೌಕರ್ಯವನ್ನು ಹೆಣ್ಣಿನ ಕಡೆಯವರು ಎಷ್ಟು ಒದಗಿಸಿ ಕೊಟ್ಟರೂ ಕಡಿಮೆಯೇ ಇರುವದು. ಸ್ತ್ರೀಯರು ಅಸ್ವತಂತ್ರರೆಂದೇ ಪುರುಷರ ಅಭಿಪ್ರಾಯವು." ಯದುಕುಮಾರಿಯು ನಗುನಗುತ ಹೇಳಿದಳು.

"ಯದುಬಾಲೆ, ಹೋಗಲಿ ಬಿಡು. ಆ ವಿಚಾರವನ್ನು ತೆಗೆದುಕೊಂಡು ನಾವು ಮಾಡುವದೇನು? ನೀನು ನನ್ನನ್ನು ಮನಸಾ ವರಿಸಿರುವೆನೆಂದು ಹೇಳಿದೆಯಲ್ಲವೆ? ನೀನು ನನ್ನನ್ನು ವರಿಸುವ ಬಗ್ಗೆ ವಿಶ್ವಸನೀಯವಾದ ಭರವಸೆಯನ್ನು ಕೊಡಬಲ್ಲೆಯಾ?"

"ನಾರಾಯಣದೇವ! ಇದುವರೆಗೆ ನಿಮಗೆ ನಾನು ಅದೇ ವಿಚಾರವನ್ನೇ ಹೇಳಿರುವೆನು. ನಾನು ನಿಮಗೆ ಇನ್ನು ಯಾವ ರೀತಿಯಲ್ಲಿ ಭರವಸೆಯನ್ನು ಕೊಡಲಿ? ನನ್ನ ಅಂತರಂಗದಲ್ಲಿ ನಿಮ್ಮ ಮೂರ್ತಿಯು ವಿಕಸಿತವಾಗಿದೆಯೆಂಬುದನ್ನು ಇನ್ನೊಮ್ಮೆ ಸ್ಪಷ್ಟವಾಗಿ ತಿಳಿಸುವೆನು."

"ಯದು, ನೀನು ಒಳ್ಳೇ ನಿಶ್ಚಲ ಮನಸ್ಕಳಿರುವೆಯೆಂಬುದನ್ನು ಬಲ್ಲೆನು. ಒಂದುವೇಳೆ ಆಕಸ್ಮಿಕ ಘಟನೆಯಿಂದ ನನ್ನ-ನಿನ್ನ ವಿವಾಹವು ನೆರವೇರುವದರಲ್ಲಿಯೇ ನಾನು ಮೃತನಾದರೆ—"

"ನಾನಾದರೂ ಅದೇ ದಾರಿಯನ್ನೇ ಹಿಡಿಯಬೇಕಾಗುವದು. ಆಲಂಗೀರನ ವಕ್ರದೃಷ್ಟಿಗೆ ಎಷ್ಟೋ ಜನ ಆರ್ಯಾಂಗನೆಯರು ಬಲಿಯಾಗಿರುವರು. ಅದರಂತೆ ನನ್ನ ಸ್ಥಿತಿಯು ಆಗಲಿಕ್ಕಿಲ್ಲವೆಂಬುದನ್ನಾದರೂ ಹೇಳಲಿಕ್ಕೆ ಬರುವದಿಲ್ಲ. ಲೋಭತ್ವದ ಮೂರ್ತಿಗಳಾದ ಅನೇಕ ಹಿಂದುಗಳು ಸ್ವಾಭಿಮಾನವನ್ನು ತೊರೆದು, ಅಧಿಕಾರ ಲಾಲಸೆ

ಯಿಂದ ಬಾದಶಹನೊಡನೆ ಸಂಬಂಧವನ್ನಿಟ್ಟು ಕುಲಕಲಂಕಿತರಾಗಿರುವರು. ನಿಮ್ಮ
ಗುಣಗಳು ಅವರಂತಿರದ್ದರಿಂದ ನಾನು ನಿಮ್ಮನ್ನು ಇಚ್ಛಿಸಿದೆನು. ವಿಧಾತನ ನಿಯತಿಯು
ಇದಕ್ಕೆ ಪ್ರತಿಕೂಲವಿದ್ದಲ್ಲಿ ನೀವಾದರೂ ಏನು ಮಾಡಬಲ್ಲಿರಿ! ಆಗ ಮುಂದೆ ಬಾಳ
ಬೇಕೆಂಬ ಇಚ್ಛೆಯನ್ನು ನಾನಾದರೂ ಏಕೆ ಹಿಡಿಯಬೇಕು? ಯೋಗ್ಯಕಾಲದಲ್ಲಿ ಪತಿ
ಯನ್ನು ಕಳಕೊಂಡು ಯವನ ಝನಾನಖಾನೆಗೆ ಗುರಿಯಾಗುವದಕ್ಕಿಂತಲೂ, ಪವಿತ್ರ
ವಾದ ಈ ಯಮುನೆಯಲ್ಲಿ ಆತ್ಮತ್ಯಾಗಮಾಡುವುದು ನನಗೆ ಭೂಷಣವಿರುವುದು.”

ಯದುಕುಮಾರಿಯ ಮಾತುಗಳಿಂದ ನಾರಾಯಣದೇವನು ಆನಂದಿತನಾದನು.
ಕುಮಾರಿಯು ಗುಣರೂಪಗಳಿಂದ ತನಗೆ ಪತ್ನಿಯಾಗಲಿಕ್ಕೆ ಯೋಗ್ಯಳಿರುವಳೆಂದು
ಅವನು ಅಂದುಕೊಂಡನು. ಕುಮಾರಿಯ ದೃಢನಿಶ್ಚಯವನ್ನು ನೋಡಿ ಅವನಿಗೆ
ಬಹಳ ಸಂಭ್ರಮವಾಯಿತು. ಇದುವರೆಗೆ ನಾರಾಯಣದೇವನ ಹೃದಯದಲ್ಲಿ ಮಸಕ
ಮಸಕಾಗಿ ಮೂಡಿದ್ದ ಆ ಆರ್ಯಾಂಗನೆಯ ಚಿತ್ರವು ಈಗ ಆತನ ಹೃದಯ ಪಟಲ
ದಲ್ಲಿ ಸ್ಥಿರವಾಗಿ ನಿಂತಿತು. ವರ್ಧಮಾನ ಸ್ಥಿತಿಯಲ್ಲಿದ್ದ ತನ್ನ ಪ್ರೇಮವನ್ನು ಕುಮಾ
ರಿಯ ನಿದರ್ಶನಕ್ಕೆ ತಂದುಕೊಡಬೇಕೆಂದು ಬಗೆದು, ನಾರಾಯಣದೇವನು “ಯದು
ಬಾಲೆ, ನಿನ್ನ ವಿಚಾರಗಳು ಸ್ತುತ್ಯವಾದವುಗಳಿರುವುವು. ನಿನ್ನ ಗುಣಗಾನವನ್ನು
ಎಷ್ಟು ಮಾಡಿದರೂ ಕಡಿಮೆಯೇ ಇರುವುದು. ಯದು, ಪ್ರಣಯಾನಂದದ ಮುಂದೆ
ಉಳಿದ ಎಲ್ಲ ಸುಖಗಳೂ ಅಲ್ಪವೇ ಸರಿ. ಅದರಲ್ಲೂ ನನ್ನ ನಿನ್ನಂತೆ ಭಿನ್ನಾಭಿಪ್ರಾಯ
ಗಳಿಲ್ಲದೆ, ಸಹಜವಾದ ಪ್ರೇಮದಿಂದ ಪರಸ್ಪರ ಆತ್ಮಾರ್ಪಣೆ ಮಾಡಿದ ದಂಪತಿಗಳ
ಸುಖಕ್ಕೆ ಎಣೆಯಿದೆಯೇ? ಕುಮಾರಿ, ಆ ಆನಂದದ ಸುಖವನ್ನು ಅನುಭವದ
ಮೂಲಕ ತಿಳಿಯಬೇಕಲ್ಲದೆ, ಕಲ್ಪನೆಯಿಂದ ತಿಳಿಯುವಂತಿಲ್ಲ. ನನಗೆ ನಿನ್ನಲ್ಲಿಯ
ಪ್ರೇಮದ ನೆಲೆಯನ್ನು ತೋರಿಸಬೇಕೆಂದು ಬಹು ದಿನಗಳಿಂದಲೂ ಆಲೋಚಿಸಿದ್ದೆನು;
ಆದರೆ ಇದುವರೆಗೆ ನಮಗೆ ಏಕಾಂತಕ್ಕೆ ಅವಕಾಶವು ದೊರೆತಿದ್ದಿಲ್ಲ. ಈಗ ಆ ಸುಸಂ
ಧಿಯು ತಾನಾಗಿಯೇ ಒದಗಿರುವದು. ಎಲ್ಲಿ, ಹೀಗೆ ಬಾ; ನಿನ್ನ ಮುಂದಗಮನ
ವನ್ನು ನೋಡುವೆನು.”

ನಾರಾಯಣದೇವನ ಮಾತಿನಿಂದ ಯದುಕುಮಾರಿಯು ಬೆಚ್ಚಿಬಿದ್ದಳು.
ಅವನು ಉಚ್ಚಮನೋವೃತ್ತಿಯವನಿದ್ದರೂ ವಿವಾಹವಿಧಿಗೆ ಮುಂಚಿತವಾಗಿಯೇ
ತನ್ನೊಡನೆ ಸಂಬಂಧವನ್ನಿಡುವದಕ್ಕಾಗಿ ಆತುರಗೊಂಡಿದ್ದನ್ನು ನೋಡಿ ಅವಳಿಗೆ ಕಡು
ಖೇದವೆನಿಸಿತು. ತನ್ನ ಭಾವೀಮನೋರಮಣನ ಅವಿನೀತ ಕೃತಿಗಾಗಿ ಅವಳ ಮನಸ್ಸು
ಇತ್ತಂಡವಾಯಿತು. ನಾರಾಯಣದೇವನ ಮನಸ್ಸಿನಂತೆ ತಾನು ನಡೆಯಲು ಸಿದ್ಧಳಾ
ದರೆ, ಮುಂದೆ ಲೋಕನಿಂದೆಗೆ ಗುರಿಯಾಗಬೇಕಾಗುವದೆಂದು ಅವಳು ಬಹು ಪರಿ
ಯಾಗಿ ಹೊಯ್ದಾಡಿದಳು. ತನ್ನ ಹೃದಯಾಪಹಾರಕನಲ್ಲಿ ಈ ರೀತಿಯ ಅನೀತಿಯ
ಭಾವನೆಗಳು ತಲೆದೋರಿದ್ದಕ್ಕಾಗಿ ಆ ಪ್ರಮದೆಯು ಅತಿರೇಕವಾಗಿ ಪಶ್ಚಾತ್ತಾಪಪಡ
ತೊಡಗಿದ್ದಳು. ಯದುಬಾಲೆಯು ತನ್ನ ಪ್ರಣಯದೇವನಿಗೆ ಎರಡು ನೀತಿಯ ಮಾತು

ಗಳನ್ನು ಹೇಳಿ, ಅವನನ್ನು ಸತ್ಪಥಕ್ಕೆ ಹಚ್ಚಬೇಕೆಂದು ಯೋಚಿಸಿ "ನಾರಾಯಣದೇವ, ನಾನು ನಿಮ್ಮ ಹೊರತು ಬೇರೆ ಯಾರೊಬ್ಬರನ್ನೂ ವಿವಾಹವಾಗುವದಿಲ್ಲವೆಂಬುದನ್ನು ಶಪಥಪೂರ್ವಕವಾಗಿ ನಿಶ್ಚಯಿಸಿರುವೆನು. ನನ್ನ ಈ ಮನೋನಿಶ್ಚಯವು ಎಷ್ಟರ ಮಟ್ಟಿಗೆ ಇದೆ ಎಂಬುದನ್ನು ಚಿರಪರಿಚಿತರಾದ ನಿಮಗೆ ಹೇಳಲಿಕ್ಕೆಬೇಡ. ನಾವು ಈಗ ಪರಸ್ಪರ ಆತ್ಮಾರ್ಪಣ ಮಾಡಿದ್ದರೂ ವಿಧಿಪೂರ್ವಕವಾಗಿ ವಿವಾಹಿತರಾಗಿಲ್ಲ. ಸಂಸ್ಕಾರ ದೃಷ್ಟಿಯಿಂದ ಅವಿವಾಹಿತರಾದ ನಾವು, ಪರಸ್ಪರ ಸಂಬಂಧವನ್ನಿಡುವದು ಸಾಮಾಜಿಕ ನಿಯಮದಂತೆ ಅತ್ಯಾಚಾರವೆನಿಸುವದು. ಯಥಾವಿಧಿಯಾಗಿ ವಿವಾಹವಾದನಂತರವೇ ನಮ್ಮಿಬ್ಬರ ಪ್ರೇಮಮಿಲನವು ಸಾಂಗವಾಗಬಹುದಾಗಿದೆ. ನೀವು ಅಲ್ಲಿಯವರೆಗೆ ಆತ್ಮಸಂಯಮನ ಮಾಡಬೇಕೆಂದು ಸೆರಗೊಡ್ಡಿ ಬೇಡುವೆನು.'

ಯದುಕುಮಾರಿಯ ಮಾತುಗಳಿಂದ ನಾರಾಯಣದೇವನಿಗೆ ನಗುವು ಉಕ್ಕಿ ಬಂದಿತು! ಅವನು ಗಹಗಹಿಸಿ ನಗುತ್ತಾ ಹೇಳಿದನು:—"ಯದು, ನೀನು ವಿಚಿತ್ರ ಮನಸ್ಕಳಿರುವೆ. ವಿವಾಹವಿಧಿಯು ಪೂರ್ಣವಾಗದೆ ನಾನು ನಿನ್ನನ್ನು ದಾಂಪತ್ಯ ಸುಖಾಪೇಕ್ಷೆಯಿಂದಲೇ ಕರೆದೆನೆಂದು ನೀನು ಕಲ್ಪಿಸಿದ್ದನ್ನು ನೋಡಿ ನನಗೆ ಪರಮಾಶ್ಚರ್ಯವಾಗಿದೆ. ಕುಮಾರಿ, ನಾನು ಅಷ್ಟೊಂದು ಕೀಳು ಮನೋವೃತ್ತಿಯವನಿರುವೆನೆಂದು ಭಾವಿಸಬೇಡ. ವೈವಾಹಿಕ ಸಂಸ್ಕಾರವು ನೆರವೇರಿರುವವರೆಗೆ ನೀನು ಪರವನಿತೆಯಾಗಿರುವೆಯೆಂಬದನ್ನು ಬಲ್ಲೆನು. ನನಗೆ ನಿನ್ನಲ್ಲಿಯ ಪ್ರೇಮವು ವಿಷಯಸುಖದ ಯಾವ ಆಶೆಗೂ ಕಡಿಮೆಯಾಗಿಲ್ಲವೆಂಬುವದನ್ನು ತೋರಿಸುವದಕ್ಕಾಗಿ ಕರೆದೆನಲ್ಲದೆ, ಕಾಮಾತುರತೆಯಿಂದಲ್ಲವೆಂಬುದನ್ನು ಈಗಲಾದರೂ ತಿಳಿದುಕೋ."

ನಾರಾಯಣದೇವನ ಮಾತಿನಿಂದ ಯದುಕುಮಾರಿಯು ಲಜ್ಜಾವನತ ಮುಖಿಯಾದಳು. ನಾರಾಯಣದೇವನ ಮಾತಿಗೆ ತಾನು ಕೊಟ್ಟ ಉತ್ತರವು ತೀರ ಅನುಚಿತವಾಯಿತೆಂದು ಅವಳು ಭಾವಿಸಿದಳು. ಕರ್ತವ್ಯ ಧರ್ಮಾಭಿಮಾನಿಯೂ, ಉಚ್ಚ ಮನೋವೃತ್ತಿಯವನೂ, ಆತ್ಮಸಂಯಮಿಯೂ ಆದ ತನ್ನ ಭಾವೀ ಪತಿಯು ತನ್ನ ಅನುಚಿತ ಮಾತಿನ ಬಗ್ಗೆ ತನ್ನನ್ನು ನಿರ್ಲಜ್ಜಳೆಂದು ತಿಳಿದಿರಬಹುದೇನೆಂದು ಅವಳು ತಳಮಳಗೊಳ್ಳತೊಡಗಿದಳು. ಆ ಸರಳ ಹೃದಯದ ಬಾಲೆಯು ಬಹಳ ವೇಳೆಯವರೆಗೆ ಅವನತ ಮುಖಿಯಾಗಿಯೇ ನಿಂತಿದ್ದಳು. ತನ್ನ ಮಾತಿಗೆ ತಾಟಸ್ಥ್ಯವೃತ್ತಿಯಿಂದಿದ್ದ ಯದುಬಾಲೆಯನ್ನು ನೋಡುತ್ತ ನಾರಾಯಣದೇವನು ಹೇಳಿದನು:—
"ಕುಮಾರಿ, ನನ್ನ ಹಿಂದೆ ಬರಲಿಕ್ಕೆ ಪ್ರತ್ಯವಾಯವಿಲ್ಲವಾದರೆ, ನಿನ್ನ ಪ್ರೇಮದ ಕುರುಹನ್ನು ತೋರಿಸುವೆನು."

ನಾರಾಯಣದೇವನು ಕುಮಾರಿಯನ್ನು ಕರೆದುಕೊಂಡು ಆ ನಡುಗಾಡಿನಲ್ಲಿ ನಡೆದನು. ಅವರು ಸುಮಾರು ಅರ್ಧ ಮೈಲಿಯನ್ನು ಕ್ರಮಿಸಿದ ಬಳಿಕ ನಾರಾಯಣದೇವನು ಗಕ್ಕನೆ ನಿಂತನು. ತನ್ನ ಹೃದಯವನ್ನು ಒಪ್ಪಿಸಿ, ಶಿರಬಾಗಿ ನಿಂತ ಅವಳ ಕಮಲಸದೃಶ ಮುಖವನ್ನು ನೋಡುತ್ತಾ ಅವನು ಅಲ್ಲಿಯೇ ಬಿದ್ದಿದ್ದ ಒಂದು ಕಲ್ಲು ಹಲಿಗೆ

ಯನ್ನು ಅವನು ಬದಿಗೆ ಸರಿಸಿದನು. ಅಲ್ಲಿ ಒಂದು ನೆಲಮಾಳಿಗೆಯಂತಿದ್ದು, ಕೆಳಗಿಳಿಯುವದಕ್ಕೆ ಸಾಲಾದ ಮೆಟ್ಟಲುಗಳನ್ನು ಕಟ್ಟಿದ್ದರು. ಆ ಮೆಟ್ಟಲುಗಳ ಎರಡು ಅಂಚುಗಳಲ್ಲಿಯೂ ಅಮೃತ ಶಿಲೆಯಿಂದ ನಿರ್ಮಿತವಾದ ಎರಡು ಕೈಪಿಡಿಗಳಿದ್ದು, ಅವುಗಳಲ್ಲಿ ಚಿತ್ರವಿಚಿತ್ರವಾದ ಕೆತ್ತನೆಯ ಕೆಲಸಗಳನ್ನು ಮಾಡಿದ್ದರು. ಆ ಕೈಪಿಡಿಯ ಮೇಲುಭಾಗದ ಒಂದೆಡೆಯಲ್ಲಿ ಹಿಂದೂ ವರಕವಿಗಳ ಮೂರ್ತಿಗಳೂ, ಇನ್ನೊಂದೆಡೆಯಲ್ಲಿ ಸನಾತನ ಧರ್ಮಜ್ಯೋತಿಯನ್ನು ಎತ್ತಿ ಹಿಡಿದ ಭಾರತದ ದಿವ್ಯ ವಿಭೂತಿಗಳ ಪ್ರತಿಮೆಗಳೂ ಸಾಲಾಗಿ ಇಡಲ್ಪಟ್ಟಿದ್ದವು. ಸೋಪಾನದ ಬಲಭಾಗಕ್ಕೆ ತಿರುಗಿದೊಡನೆಯೇ ರನ್ನ, ನೃಪತುಂಗ, ಆದಿಪಂಪ, ಅಭಿನವಪಂಪ, ಜನ್ನ ಮೊದಲಾದ ಕನ್ನಡ ಕವಿವರರ ನೆನಪುಂಟಾಗುತ್ತಿತ್ತು. ಎಡ ಭಾಗದಲ್ಲಿನ ವಿರಕ್ತ ಶಿಖಾಮಣಿಗಳ ಮೂರ್ತಿಗಳಾದರೂ ನೋಡುವರ ಹೃದಯವನ್ನು ಅರಳಿಸದೆ ಬಿಡುತ್ತಿದ್ದಿಲ್ಲ. ಕುಮಾರಿಯು ಅಲ್ಲಿಯ ದೃಶ್ಯಾವಳಿಗಳನ್ನು ನೋಡುತ್ತಾ ಕೆಳಗಿಳಿಯತೊಡಗಿದಳು. ನಾರಾಯಣ ದೇವನು ಅಲ್ಲಿಯ ನಿರ್ದಿಷ್ಟಸ್ಥಳಗಳ ಪರಿಚಯವನ್ನು ತನ್ನ ಭಾವೀ ಪ್ರಿಯತಮೆಗೆ ಹೇಳುತ್ತಾ ಮುಂದೆ ಸಾಗಿದ್ದನು.

"ಕುಮಾರಿ, ಇದು ಶಸ್ತ್ರಾಗಾರವು. ದಿವಂಗತ ಪಿತಾಮಹರಾದ ಗೋವಿಂದ ದೇವರ ಕಾಲದಲ್ಲಿ ಅತ್ಯಂತ ತೀಕ್ಷ್ಣಧಾರೆಯ ಶಸ್ತ್ರಗಳನ್ನು ಈ ಸ್ಥಳದಲ್ಲಿಡುತ್ತಿದ್ದರಂತೆ. ಪೂಜ್ಯರಾದ ಅಜ್ಜಂದಿರಿಂದ ನಿರ್ಮಿಸಲ್ಪಟ್ಟ ಶಸ್ತ್ರಾಗಾರವೇ ಈಗಿನ ನನ್ನ ಶಸ್ತ್ರಾಗಾರವು. ಇಗೋ ನೋಡು, ಈ ಕೋಣೆಯೇ ಮಂತ್ರಣಾಗಾರವು. ಇದನ್ನು ಅತ್ಯಂತ ಕುಶಲತೆಯಿಂದ ನಿರ್ಮಿಸಿರುವರು. ಶತ್ರುಪಕ್ಷದವರು ಒಂದು ಮುತ್ತಿಗೆ ಹಾಕಿದಲ್ಲಿ, ತಪ್ಪಿಸಿಕೊಳ್ಳಲಿಕ್ಕೆ ಈ ಮಂತ್ರಣಾಗಾರದೊಳಗಡೆಯಲ್ಲಿ ಒಂದು ಗುಪ್ತವಾದ ನೆಲ ಮಾರ್ಗವಿರುವದು. ತಂದೆಯವರೂ ಈ ಸ್ಥಳವನ್ನೇ ಮಂತ್ರಣಾಗಾರಕ್ಕೆ ಯೋಗ್ಯವಾದದ್ದೆಂದು ಆರಿಸಿದ್ದರು. ಈ ಎಡಭಾಗದ ವಿಶಾಲವಾದ ಪ್ರಾಂಗಣವೇ ನನ್ನ ಪಿತಾಮಹರ ಆರಾಧ್ಯದೇವತೆಯ ಆವಾಸವು."

"ನಾರಾಯಣದೇವ, ಈ ಶಸ್ತ್ರಾಗಾರ ಮಂತ್ರಣಾಗಾರಗಳು ಶತ್ರುಗಳಿಗೆ ಅಜೇಯ್ಯವಾಗಿಯೂ ಗುಪ್ತವಾಗಿಯೂ ಇರುವವು. ನಿಮ್ಮ ಪಿತಾಮಹರು ತಮ್ಮ ವಿಲಕ್ಷಣ ಬುದ್ಧಿಗನುಸರಿಸಿ ಈ ಸ್ಥಳವನ್ನು ನಿರ್ಮಿಸಿರುವರು. ಪೂರ್ವಿಕರ ಬುದ್ಧಿಕುಶಲತೆಗಳನ್ನರಿಯಲು ಇಂಥ ಸ್ಥಳಗಳು ಒಳ್ಳೇ ನಿದರ್ಶನಗಳಾಗಿವೆ; ಆದರೆ ನಾರಾಯಣದೇವ, ನಾವು ಇಲ್ಲಿಯವರೆಗೆ ಬಂದು ದೇವರ ದರ್ಶನ ಪಡೆಯದೆ ಹಿಂತಿರುಗುವದು ಉಚಿತವಲ್ಲ. ಗೋವಿಂದದೇವರ ಆರಾಧ್ಯದೇವತೆಯ ಸಂದರ್ಶನ ಮಾಡಿಸಿ ನನ್ನನ್ನು ಧನ್ಯಳನ್ನಾಗಿ ಮಾಡಿರಿ."

"ಯದುಬಾಲೆ, ನಾವು ಇಲ್ಲಿ ಯಾವ ದೇವಮೂರ್ತಿಯ ದರ್ಶನವನ್ನೂ ಪಡೆಯಲಾರೆವು. ಗೋವಿಂದದೇವರು ಇಲ್ಲಿ ಯಾವ ಕಾಲ್ಪನಿಕ ಶಿಲಾಮೂರ್ತಿಯನ್ನೂ ಇಟ್ಟು ಭಜಿಸುತ್ತಿದ್ದಿಲ್ಲ."

"ಆಸ್ತಿಕಭಾವನೆಯವರಾದ ಗೋವಿಂದದೇವರು ಯಾವ ದೇವಮೂರ್ತಿಯನ್ನೂ ತಮ್ಮ ದೇವಗೃಹದಲ್ಲಿ ಇಡದಿದ್ದ ಕಾರಣವೇನು?" ಯದುಬಾಲೆಯು ವಿಸ್ಮಯದಿಂದ ಕೇಳಿದಳು.

"ಯದು, ಕಾರಣವೇನೆಂಬುದನ್ನು ನಾನು ಹೇಗೆ ಅರಿಯಲಿ? ಗೋವಿಂದದೇವರು ಜೀವಂತಸ್ಥಿತಿಯಲ್ಲಿದ್ದಾಗ ನಾನು ಹುಟ್ಟಿಯೇ ಇರಲಿಲ್ಲ. ಅಂದ ಮೇಲೆ ಅವರ ಕಾರ್ಯಕಾರಣಗಳ ಪರಿಚಯವು ನನಗೆ ಹೇಗೆ ಆಗಬೇಕು?" ಎಂದು ನಾರಾಯಣದೇವನು ನುಡಿದು, "ಕುಮಾರಿ, ದೇವಗೃಹದಲ್ಲಿ ಕಾಲ್ಪನಿಕ ಮೂರ್ತಿಯನ್ನಿಡಬೇಕಾದ ನಿರ್ಬಂಧವೇನು?"

"ಇದೇನು ಹೀಗೆ ಕೇಳುವಿರಿ? ಆಸ್ತಿಕ ಧರ್ಮದವರಾದ ನಾವು ಮೂರ್ತಿಯಿಲ್ಲದೆ ದೇವರನ್ನು ಹೇಗೆ ಭಜಿಸಲಿಕ್ಕೆ ಬರುವದು? ದೇವರೇ ಇಲ್ಲದ ಮೇಲೆ, ಅದಕ್ಕೆ ದೇವಾಲಯವೆಂಬ ಹೆಸರಾದರೂ ಏಕೆ ಸಲ್ಲಬೇಕು?"

"ದೇವರು ಸರ್ವವ್ಯಾಪಿಯು; ಅಣು, ರೇಣು, ತೃಣ, ಕಾಷ್ಠ ಪರಿಪೂರ್ಣನು."

"ಹಾಗಾದರೆ ನಿಮ್ಮ ದೃಷ್ಟಿಯಿಂದ ಶಸ್ತ್ರಾಗಾರವೂ ಒಂದು ದೇವಾಲಯವೆನಿಸಿಕೊಳ್ಳುವದು; ಮಂತ್ರಣಾಗಾರವೂ ಒಂದು ದೇವಾಲಯವೇ ಸರಿ."

"ಅದು ಹೇಗೆ?"

"ಅಹುದು. ಪರಮಾತ್ಮನು ಎಲ್ಲೆಡೆಯಲ್ಲಿಯೂ ಇರುವನಾದರೆ, ಶಸ್ತ್ರಾಗಾರವನ್ನು ದೇವಾಲಯವೆಂದು ಕರೆಯಲಿಕ್ಕೆ ಪ್ರತಿಬಂಧಕವೇನು? ಮಂತ್ರಣಾಗಾರವನ್ನೂ ಸಹ ದೇವಾಲಯವೆಂದು ಕರೆದರೆ ತಪ್ಪಾಗದು." ಕುಮಾರಿಯು ವ್ಯಂಗ್ಯವಾಗಿ ಅಂದಳು.

"ಕುಮಾರಿ, ನೀನು ಹುಚ್ಚಳಿರಲಿಕ್ಕಿಲ್ಲವಷ್ಟೆ? ಮಂತ್ರಣಾಗಾರವನ್ನಾಗಲಿ, ಶಸ್ತ್ರಾಗಾರವನ್ನಾಗಲಿ ದೇವಾಲಯವೆಂದು ಹೇಗೆ ಅನ್ನಲಿಕ್ಕೆ ಬರುವುದು? ದೇವಾಲಯವೆಂದರೆ, ದೇವರ ಪ್ರಾರ್ಥನಾ ಮಂದಿರವು. ಪ್ರಾರ್ಥನಾ ಮಂದಿರಕ್ಕೆ ಸಲ್ಲುವ ಮಾನವನ ನೈತಿಕ ನಡಾವಳಿಗಳು ಮಂತ್ರಣಾಗಾರಕ್ಕಾಗಲಿ, ಇನ್ನಿತರ ಸ್ಥಳಕ್ಕಾಗಲಿ ಸಲ್ಲುವದಿಲ್ಲ. ಪ್ರಾರ್ಥನಾ ಮಂದಿರದ ರೀತಿ ನೀತಿಗಳೇ ಬೇರೆಯಿರುವವು. ಯದುಕುಮಾರಿ, ನಿನ್ನ ಇಷ್ಟದಂತೆ ನಾನು ನಿನಗೆ ಮೂರ್ತಿಯ ದರ್ಶನವನ್ನು ಮಾಡಿಸುವೆನು ಅದು ನನ್ನ ಪಿತಾಮಹರ ಆರಾಧ್ಯದೇವತೆಯಲ್ಲದಿದ್ದರೂ ನನ್ನ ಶೀರ್ಘರೂಪರವರ ಔಪಾಸ್ಯ ದೇವತೆಯು."

"ನಾರಾಯಣದೇವ, ಯಾರ ಆರಾಧ್ಯದೇವತೆಯಾದರೇನು? ದೇವದರ್ಶನಕ್ಕೆ ನನಗೆ ಆ ಆರಾಧ್ಯರ ಆತಂಕವಿಲ್ಲವಷ್ಟೆ? ಆದರೆ ಗೋವಿಂದದೇವರು ತಮ್ಮ ದೇವಮಂದಿರದಲ್ಲಿ ದೇವಮೂರ್ತಿಯನ್ನಿಡದಿದ್ದ ಕಾರಣವನ್ನು ನನಗೆ ಸ್ಪಷ್ಟವಾಗಿ ತಿಳಿಸಿರಿ. ಅದನ್ನು ಕೇಳುವದಕ್ಕಾಗಿ ನಾನು ಆತೆಗೊಂಡಿರುವೆನು."

"ಯದು, ಅದನ್ನು ನಾನು ಹಿಂದಿನಿಂದ ತಿಳಿಸುವೆನು. ಸದ್ಯಕ್ಕೆ ನಾವು ಇಲ್ಲಿಯ ಅಧಿದೇವತೆಯಾದ ಮಹಾಚೈತನ್ಯಸ್ವಾಮಿಯ ದರ್ಶನಪಡೆದು ಮನೆಗೆ ಹಿಂದಿರುಗೋಣ. ನಾವು ಇಲ್ಲಿ ಹೆಚ್ಚು ವೇಳೆಕಳೆಯುವದು ಹಿತಾವಹವಾಗಿ ತೋರುವದಿಲ್ಲ."

ನಾರಾಯಣದೇವನು ಹೀಗೆ ನುಡಿದವನೇ ಬಲಕ್ಕೆ ಹೊರಳಿ ನಡೆದನು. ಎರಡು ವಿಶಾಲ ಪ್ರಾಂಗಣಗಳನ್ನು ದಾಟಿದ ಬಳಿಕ ಅವರು ಮತ್ತೊಂದು ಸಂಕುಚಿತ ಭಾಗವನ್ನು ಸೇರಿದರು. ಆ ಭಾಗದ ಮಧ್ಯದಲ್ಲಿ ಬಹುಮೂಲ್ಯವಾದ ವೇದಿಕೆಯ ಮೇಲೆ ಚೈತನ್ಯಸ್ವಾಮಿಯ ಸುವರ್ಣಖಚಿತ ಮೂರ್ತಿಯು ಅಭಯಮುದ್ರೆಯಿಂದ ವಿರಾಜಮಾನವಾಗಿತ್ತು. ಅದರ ಸುತ್ತಲೂ ಘನ-ಕನಕ ವಸ್ತುಗಳು ವಿಶೇಷವಾಗಿ ಬಿದ್ದಿದ್ದವು. ಕಬ್ಬಿಣದ ಸಲಾಕಿಗಳಿಂದ ಆ ಭಾಗವನ್ನು ಅಜೇಯವೂ, ಸಮುಸ್ಯಾತ್ಮಕವೂ ಇರುವಂತೆ ಒಳ್ಳೇ ವ್ಯವಸ್ಥೆಯಿಂದ ನಿರ್ಮಿಸಿದ್ದರು. ನಾರಾಯಣದೇವನು ಅಲ್ಲಿಯ ಅಮೂಲ್ಯ ವಸ್ತುಗಳ ಕಡೆಗೆ ಬೊಟ್ಟುಮಾಡಿ ಹೇಳಿದನು: "ಕುಮಾರಿ! ಇದೇ ನಿನ್ನ ಪ್ರೇಮದ ಕುರುಹು. ನೀನು ನನ್ನ ಪತ್ನಿಯಾದರೆ ಈ ಅನರ್ಘ್ಯ ರತ್ನರಾಶಿಗಳನ್ನು ನಿನ್ನ ಇಷ್ಟನಂತೆ ವೆಚ್ಚಮಾಡಲು ನೀನು ಅಧಿಕಾರಿಯಾಗುವೆ."

"ನಾರಾಯಣದೇವ! ವೈಭವದ ಹೆಮ್ಮೆಯನ್ನು ತೋರಿಸಬೇಕೆಂದು ನಾನು ನಿಮ್ಮನ್ನು ಇಚ್ಛಿಸುವದಿಲ್ಲ. ನಿಮ್ಮ ಗುಣಗಳಿಗೆ ನಾನು ಮುಗ್ಧಳಾಗಿರುವೆನು. ಒಂದು ವೇಳೆ ನೀವು ಒಬ್ಬ ಸಾಮಾನ್ಯ ಬಡುವರಂತಿದ್ದರೂ ನಾನು ನಿಮ್ಮನ್ನೇ ಇಚ್ಛಿಸುತ್ತಿದ್ದೆನು."

"ಕುಮಾರಿ, ನಿನ್ನ ಗುಣಗಳು ಆದರ್ಶವಾಗಿರುವವು. ನೀನು ನನ್ನನ್ನು ಪುನಸಾ ವರಿಸಿರುವೆ. ನಾನಾದರೂ ನಿನ್ನನ್ನು ವರಿಸುವ ಬಗ್ಗೆ ಉತ್ಸುಕನಾಗಿರುವೆನು. ಅಂಥಾಭಿಮಾನಿಗಳಾದ ಹಿಂದುಗಳು ನಮ್ಮಿಬ್ಬರ ದಾಂಪತ್ಯವನ್ನು ನಿರಾಕರಿಸಿದಲ್ಲಿ, ಉಭಯತರ ಜೀವನವೂ ನೀರಸವೂ ನಿರಾಧಾರವೂ ಆಗುವುದು. ನಾವಂತೂ ಪರಸ್ಪರ ಆತ್ಮನಿವೇದನ ಮಾಡಿರುವೆವು. ಈ ನಮ್ಮ ಪ್ರಥಮ ಸಮಾವೇಶವು ಭಾವೀಜೀವನ ಸಂಗ್ರಾಮದ ಶಾಂತಿಸೂಚಕವೋ ಅಥವಾ ದುಃಖಸೂಚಕವೋ ಆದಾರು ಬಲ್ಲರು? ಹಿಂದೂಗಳಲ್ಲಿ ವಿಶಾಲಭಾವವಿರುವದಿಲ್ಲ. ವಿಮರ್ಶಾತ್ಮಕ ಬುದ್ಧಿಯಿರುವದಿಲ್ಲ. ಮತ-ಮತಗಳಲ್ಲಿ ಸಹಾನುಭೂತಿಯಿರುವದಿಲ್ಲ. ಈ ಗುಣಗಳ ಅಭಾವದಿಂದಲೇ ಹಿಂದೂಗಳು ಮೊಗಲರ ದಾಸರಾಗಿರುವರು. ಯದುಬಾಲೆ, ಹಿಂದೂಗಳಲ್ಲಿ ಈ ವಿಧವಾದ ದುರ್ಗುಣಗಳಿಲ್ಲದಿದ್ದರೆ, ಘುರಾಣಿ, ಮೊಗಲ ಮೊದಲಾದ ಅವಿಂಧರ ಆಕ್ರಮಣಕ್ಕೆ ಹಿಂದುಸ್ತಾನವು ಏಕೆ ಬಲಿಯಾಗುತಿತ್ತು? 'ಹೂಂ ಸರಕಾರ, ಜೋ ಹುಕಂ' ಅನ್ನುವ ಮೊಗಲರ ದಾಸ್ಯಪಂಕದಲ್ಲಿ ಹೂತಿರುವ ಹಿಂದೂಗಳನ್ನು ಮೇಲಕ್ಕೆತ್ತಲು ಒಂದೆಡೆಯಲ್ಲಿ ನಿಃಸ್ವಾರ್ಥದೇವಿಯೂ ಇನ್ನೊಂದೆಡೆಯಲ್ಲಿ ಸರ್ವಮತ ಸಹಾನುಭೂತಿ-ಮೂರ್ತಿಯೂ ಟೊಂಕಬಿಗಿದು ನಿಂತಿರುವಾಗ, ಹಿಂದೂಗಳು ತಮ್ಮ ಎರಡೂ ಕೈಗಳನ್ನು ಆ ಮೂರ್ತಿದ್ವಯರ ಕೈಗಳಲ್ಲಿ ಕೊಟ್ಟು ಮೇಲೇಳಬಾರದೆ? ಕುಮಾರಿ, ಮಹಾಚೈತನ್ಯಸ್ವಾಮಿಯ ಎದುರಿನಲ್ಲಿ ನಾನು ಹೇಳುವ ಮಾತುಗಳೆಲ್ಲವೂ ನಿನ್ನ ಸ್ಮರಣದಲ್ಲಿರಲಿ. ಒಟ್ಟಿನಲ್ಲಿ ಧರ್ಮದ ಜೀವರಹಿತ ಕಳೇಬರವು ಹಿಂದೂಗಳ ಪಾಲಿಗುಳಿಯದಂತೆ ನೋಡಿಕೊಳ್ಳೆಂದು ಚೈತನ್ಯಸ್ವಾಮಿಯನ್ನು ಪ್ರಾರ್ಥಿಸುವೆನು. ಇದಕ್ಕೂ ಹೆಚ್ಚಿಗೆ ನಾನು ಏನನ್ನು ಬಯಸಲಿ?

## ಇದೇ ನನ್ನ ಅಂತ್ಯದ ಗುರುತು.

ಅಕ್ಬರ ಬಾದಶಹನು ತನ್ನ ರಾಜನೈತಿಕ ಗುಣಗಳಿಂದ ಭಾರತವರ್ಷವೆಲ್ಲವನ್ನೂ ಪಾದಾಕ್ರಾಂತ ಮಾಡಿಕೊಂಡಿದ್ದನು. ಸರ್ವ ಹಿಂದುಸ್ಥಾನದಲ್ಲಿಯೂ ಯವನ ಸತ್ತೆಯನ್ನು ನೆಲೆಗೊಳಿಸಬೇಕೆಂಬ ಆತನ ಹೆಬ್ಬಯಕೆಯು ಹದಿನೈದು ಆಣೆಯಷ್ಟು (ಅಂಶದಷ್ಟು) ಪೂರ್ಣವಾಗಿದ್ದಿತು. ಮೊಗಲ ರಾಜ್ಯದ ಆಧಾರಸ್ತಂಭರಾದ ಹಿಂದೂಗಳ ಮನವೊಲಿಸುವದಕ್ಕಾಗಿ ಆ ಸಾಹಸಿಯು ಶಕ್ತಿಮೀರಿ ಹೆಣಗಿದ್ದನು. ರಾಜಾಸ್ಥಾನದಲ್ಲಿ ಹಿಂದುಗಳಿಗೆ ದೊಡ್ಡದೊಡ್ಡ ಹುದ್ದೆಗಳು ಕೊಡಲ್ಪಟ್ಟಿದ್ದವು. ಅವನ ಸಾಮ್ರಾಜ್ಯ ವಿಸ್ತರಣೆಯ ಕಾಲದಲ್ಲಿ ತನಗೆ ನೆರವಾದ ರಾಜಮನೆತನದವರನೇಕರಿಗೆ ದೊಡ್ಡ-ದೊಡ್ಡ ಜಹಗೀರುಗಳನ್ನು ಕೊಟ್ಟು ಮನ್ನಿಸಿದ್ದನು. ಹಿಂದೂಗಳ ಸ್ವಾತಂತ್ರ್ಯವನ್ನು ಅವನು ಬಲಾತ್ಕಾರದಿಂದ ಹರಣ ಮಾಡಿದ್ದಿಲ್ಲ; ತನ್ನಲ್ಲಿಯ ಪ್ರಭುತ್ವ-ಸ್ಥೈರ್ಯ ಗುಣಗಳಿಂದಲೇ ಅವನು ಭಾರತವರ್ಷದ ಸಮ್ರಾಟನಾಗಿದ್ದನು.

ನರನೂರು ನಾರಾಯಣದೇವನ ಹಿರಿಯಜ್ಜನಿಗೆ ಅಕ್ಬರ ಬಾದಶಹನಿಂದ ಬಿಡಲ್ಪಟ್ಟ ಜಹಗೀರಿಯಾಗಿತ್ತು. ಯವನ ಜನಪದವಾದ ನರನೂರಿನಲ್ಲಿ ಕ್ಷುದ್ರ ಯವನರ ಕ್ರೂರಕೃತ್ಯಗಳು ಅಸಂಖ್ಯಾಕವಾಗಿ ನಡೆಯತೊಡಗಿದ್ದವು; ಆದರೆ ಎಂದಿನಿಂದ ಹಿಂದೂ ಪದಪಾತಶಾಹಿಯು ನರನೂರಿನ ಮೇಲೆ ನಡೆಸತೊಡಗಿತೋ, ಅಂದಿನಿಂದಲೂ ಹಿಂದೂಗಳಿಗೆ ಸುಖ-ಸ್ವಾಸ್ಥ್ಯಗಳು ದೊರಕಿ, ಜನತೆಯಲ್ಲಿ ಶಾಂತಿಯು ನೆಲೆಕೊಂಡಿತ್ತು. ನಾರಾಯಣದೇವನ ಹಿರಿಯಜ್ಜನಾದ ಗೋವಿಂದದೇವನ ಮೊಮ್ಮಗನಾದ ಪಾಂಡ್ಯಳದೇವನು ಅಪುತ್ರವಂತನಾಗಿದ್ದುದರಿಂದ, ನಾರಾಯಣದೇವನನ್ನು ದತ್ತಕ ಮಾಡಿಕೊಂಡಿದ್ದನು. ಸದ್ಯಕ್ಕೆ ಪಾಂಡ್ಯಳದೇವನು ಜೀವಂತ ಸ್ಥಿತಿಯಲ್ಲಿದ್ದಿಲ್ಲ.

"ನಾರಾಯಣ, ವೀರಪಾಲನು ಇದುವರೆಗೆ ನಿನ್ನ ದಾರಿ ನೋಡಿ ನೋಡಿ ಬೇಸತ್ತು ಈಗ ಮನೆಯ ಕಡೆಗೆ ನಡೆದನು."

ನಾರಾಯಣದೇವನು ತನ್ನ ನಿತ್ಯ ಕರ್ಮದಲ್ಲಿ ಎಂದೂ ಅಲಿಪ್ತನಾಗುತ್ತಿದ್ದಿಲ್ಲ. ಅವನು ಈ ದಿನವೂ ಸಹ ಸ್ನಾನಕ್ಕಾಗಿ ಅರುಣೋದಯ ಕಾಲದಲ್ಲಿಯೇ ಯಮುನಾ ತಟಾಕಕ್ಕೆ ಹೋಗಿದ್ದು, ತನ್ನ ನಿತ್ಯ ವಿಧಿಗಳನ್ನು ತೀರಿಸಿಕೊಂಡು ಮನೆಗೆ ಬರುವಾಗ ಸುಮಾರು ಆರು ತಾಸು ವೇಳೆಯಾಗಿತ್ತು. ಅವನು ಮನೆಗೆ ಬಂದೊಡನೆಯೇ ಅವನ ಮಾತಾಮಹಿಯು ಮೇಲಿನಂತೆ ನುಡಿದಳು.

"ಅಜ್ಜೀ, ವೀರಪಾಲರು ನನ್ನ ನಿರೀಕ್ಷಣೆ ಮಾಡುತ್ತಾ ಇಲ್ಲಿಯೇ ಇದ್ದರೇನು?" ನಾರಾಯಣದೇವನು ಉತ್ಕಂಠಿತನಾಗಿ ನುಡಿದು, "ಅವರನ್ನು ನೀನು ಇನ್ನೊಂದು ಅರಗಳಿಗೆ ಇಲ್ಲಿಯೇ ಇರಿಸಿಕೊಂಡಿದ್ದರೆ ಒಳಿತಾಗುತ್ತಿತ್ತು."

"ನಾರಾಯಣ, ನಾನು ಅವನನ್ನು ಇಲ್ಲಿ ಇರಿಸಿಕೊಳ್ಳುವ ಮಾತಂತಿರಲಿ; ಆತನನ್ನು ನೋಡಿದ ಕೂಡಲೆ ನನಗೆ ಅಂಜಿಕೆ ಬರತೊಡಗಿತು. ಅವನ ಮುಖವೆಲ್ಲವೂ

ಮದ್ಯಪಾನ ಮಾಡಿದವರಂತೆ ಕೆಂಪಾಗಿದ್ದಿತು. ಅವನ ಅಂಗಾಂಗಗಳೆಲ್ಲವೂ ಕೆಂಪಾಯ ಮಾನವಾಗಿದ್ದವು. ಇಂದು ಅವನು ಎಂದಿನ ವೀರಪಾಲನಾಗಿದ್ದಿಲ್ಲ; ಯಮಸ್ವರೂಪೀ ವೀರಪಾಲನಾಗಿದ್ದನು..''

''ಬಿಸಿಲಲ್ಲಿ ಬಂದಿದ್ದರಿಂದ ಮುಖವೆಲ್ಲವೂ ಕೆಂಪಾಗಿದ್ದಿತು. ಕೆಂಪಾದ ಮುಖದವರನ್ನೆಲ್ಲಾ ಯಮಸ್ವರೂಪರೆಂದು ತಿಳಿಯುವ ನಿಮ್ಮ ಬುದ್ಧಿಗೆ ಏನೆನ್ನಬೇಕೋ ತಿಳಿಯದಾಗಿದೆ. ಅಜ್ಜೀ, ಅವರು ಇಲ್ಲಿಗೆ ಯಾವ ಕಾರಣದಿಂದ ಬಂದಿದ್ದರು?''

''ಅವನು ಇಲ್ಲಿಗೆ ಏಕೆ ಬಂದಿದ್ದನೆಂಬ ಸಂಗತಿಯನ್ನು ನಾನರಿಯೆ; ಆದರೆ ಅವನು ನಿನ್ನ ಚಾರಿತ್ರ್ಯಕ್ಕೆ ಕುಂದುತರುವ ಕೆಲವು ಮಾತುಗಳನ್ನಾಡಿದನು. ಅವನು ಹೋಗುವಾಗ 'ಕಂಡ ಕಂಡವರು ಯದುಬಾಲೆಯನ್ನು ಬಯಸಲಿಕ್ಕೆ ಅವಳೇನು ಸೂಳೆಯರ ಹುಡಿಗಿಯೆ?' ಎಂದು ಸ್ಪಷ್ಟವಾಗಿ ಆಡಿದನು. ಆತನ ವಿಕ್ಷಿಪ್ತ ಮುಖವನ್ನು ನೋಡಿ, ನನಗೆ ಹೇಗೆ ಹೇಗೆಯೋ ಆಯಿತು.''

''ಅಜ್ಜೀ, ನಾನು ಯದುಕುಮಾರಿಯನ್ನು ಬಯಸಿದರೆ ಕಂಡಕಂಡವರೆಲ್ಲಾ ಬಯಸಿದಂತಾಯಿತೇ? ನಾನು ಆತನ ಕನ್ಯೆಯನ್ನು ವಿವಾಹವಾಗಲು ಯಾವ ಕಾರಣದಿಂದಲೂ ಅಪಾತ್ರನಿರುವದಿಲ್ಲ.''

''ನೀನು ಪೂರಾ ಅಪಾತ್ರನಿರುವೆ. ಸಮಾಜವು ನಿನ್ನನ್ನು ಧರ್ಮಚ್ಯುತನೆಂದು ಭಾವಿಸಿರುವದು.''

''ಚಿಕ್ಕಪ್ಪನೂ ಸಹ ಮೇಲಿಂದ ಮೇಲೆ ಹೀಗೆಯೇ ಅನ್ನುತ್ತಿದ್ದನು. ಅದರ ರಹಸ್ಯವನ್ನು ಅವನು ಸಾಯುವವರೆಗೂ ಒಡೆದು ಹೇಳಲೇ ಇಲ್ಲ. ಅಜ್ಜೀ, ಸಮಾಜವು ನನ್ನನ್ನು ಧರ್ಮಬಾಹ್ಯನೆಂದು ತಿಳಿಯುವಂತಹ ಗರ್ಹಣೀಯ ಕೆಲಸವನ್ನು ನಾನು ಏನು ಮಾಡಿದ್ದೆನು?''

''ಕುಮಾರ, ಅದು ನಿನ್ನ ಅಪರಾಧನಾಗಿಲ್ಲ; ನಿನ್ನ ಪಿತಾಮಹರ ಅಪರಾಧದ ಫಲವಾಗಿದೆ.''

''ಅಜ್ಜೀ, ನೀವು ಹೀಗೆ ಜಿಜ್ಞಾಸಜನಕವಾಗಿ ಮಾತನಾಡಬೇಡಿರಿ. ನಿಮ್ಮ ವರ್ಗದಲ್ಲಿ ಕುಳಿತುಕೊಳ್ಳುವಂತಹ ನಿಂದ್ಯಕಾರ್ಯವು ಅವರಿಂದಲಾದರೂ ಏನು ಘಟಿಸಿತು?''

''ಕುಮಾರ, ಆ ವಿಷಯವನ್ನು ನಾನು ಇಂದಿಲ್ಲದಿದ್ದರೆ ನಾಳೆಯಾದರೂ ನಿನಗೆ ಹೇಳಲೇಬೇಕಿತ್ತು. ಈಗ ನೀನೇ ಆ ಬಗ್ಗೆ ಪ್ರಶ್ನೆ ತೆಗೆದಿರುವದರಿಂದ ಹೇಳಲಿಕ್ಕೆ ನಾನೇಕೆ ಮನಸರಿ ಮಾಡಲಿ? ಗತವರ್ಷದಲ್ಲಿ ನಡೆದ ಮುಸಲ್ಮಾನರ ದಬ್ಬಾಳಿಕೆಯಿಂದ ಅನೇಕ ದೇಗುಲಗಳು ನೆಲಸಮವಾಗಿದ್ದವು. ಈ ನರಸೂರಿನಲ್ಲಿ ಬೇಕಾದಷ್ಟು ದೇವಾಲಯಗಳಿದ್ದವು; ಆದರೆ ಈ ದೇವಾಲಯಗಳಲೆಲ್ಲ ಶ್ರೀಚೆನ್ನಕೇಶ್ವರ ದೇವಮಂದಿರವು ಬಹು ಪುರಾತನವಾದದ್ದಾಗಿಯೂ ಕಾಮಿಕವಾಗಿಯೂ ಇದ್ದಿತು. ಆ ಚೆನ್ನಕೇಶ್ವರ ದೇವಾಲಯದ ವಿಷಯದಲ್ಲಿ ಅನೇಕ ಶಿಲಾಲೇಖಗಳು ದೊರೆತಿರುವವು. ಈ ದೇವಾಲಯದಲ್ಲಿದ್ದಷ್ಟು ಬಹು ಬೆಲೆಯ ವಸ್ತ್ರ-ಒಡವೆಗಳು ಈ ಭಾಗದ ಇನ್ನಾವ ದೇವಾಲಯ

ಗಳಲ್ಲಿಯೂ ಇದ್ದಿಲ್ಲವೆಂದು ಬಹು ಜನರು ಅನ್ನುತ್ತಿದ್ದರು. ಗುಜರಾಥದ ಸೋಮನಾಥ ದೇವಾಲಯವೂ ನರನೂಲಿನ ಜೆನ್ನಕೇಶ್ವರ ದೇವಮಂದಿರವೂ ವೈಭವದಲ್ಲಿ ಸರಿಸಮಾನಸ್ಕಂಧವಾಗಿದ್ದವು; ಆದರೆ ಮೂರ್ತಿಭೇದಕನಾದ ಮಹಮ್ಮದ ಘಜನಿಯು ಹಿಂದುಸ್ಥಾನಕ್ಕೆ ಯಾವಾಗ ಪದಾರ್ಪಣ ಮಾಡಿದನೋ, ಆಗಲೆ ನಮ್ಮ ದೇವಮಂದಿರವೂ ಉಧ್ವಸ್ತವಾಯಿತು. ಆವಿಾತ ಹಿಂದೂಗಳ ಅಂತಃಕರಣಗಳೆಲ್ಲವೂ ಒಂದಾಗಿ ಕಲೆತು ಪರಸ್ಪರ ಸಹಾಯದಿಂದ ವರ್ತಿಸಿದ್ದರಿಂದ ದೇವಮೂರ್ತಿಯು ಆ ಯವನನ ವಜ್ರಾಘಾತಕ್ಕೆ ತುತ್ತಾಗಲಿಲ್ಲ. ದೇವಾಲಯದ ಎಲ್ಲಾ ಧನ-ಕನಕ ವಸ್ತುಗಳನ್ನೂ ಒಂಟೆಗಳ ಮೇಲೂ ಕುದುರೆಗಳ ಮೇಲೂ ಹೇರಿಕೊಂಡು ಮಹಮ್ಮದನು ತನ್ನೂರಿಗೆ ನಡೆದನು. ಆ ದೇವಾಲಯವು ಮುಂದೆ ಅನೇಕ ವರ್ಷಗಳವರೆಗೆ ಜೀರ್ಣೋದ್ಧಾರವಾಗಲಿಲ್ಲ. ತರುವಾಯ ಅನೇಕ ಮನೆತನದವರು ರಾಜ್ಯವಾಳಿ ಕಡೆಗೆ ಮೊಗಲರ ಅಧೀನಕ್ಕೆ ಸಿಂಹಾಸನವು ದೊರೆಯಿತು.

ಮೊಗಲರ ಮೂರನೆಯ ದೊರೆಯಾದ ಅಕ್ಬರನು ಪಟ್ಟಕ್ಕೆ ಬಂದಾಗ ಹಿಂದುಗಳು ಯವನರ ಚಿತ್ರಹಿಂಸೆಯಿಂದ ಬೇಸತ್ತಿದ್ದರು. ಅಕ್ಬರನ ಸೋದರಮಾವನಾದ ಬಹಿರಾಮನು ಅತ್ಯಂತ ರಾಕ್ಷಸೀ ಸ್ವಭಾವದವನಾಗಿದ್ದನು. ಈಗಿನ ಆಲಂಗೀರನಂತೆ ಅವನೂ ಧರ್ಮಾಂಧನಾಗಿ ಅನೇಕರನ್ನು ಜಾತಿಕೆಡಿಸಿದ್ದನು. ಆಲಂಗೀರನು ಎರಡು ವರ್ಷಗಳಲ್ಲಿ ಮಾಡುವ ಬಲವದ್ಧಂಥ ಮತಪ್ರಸಾರವನ್ನು ಬಹಿರಾಮನು ಒಂದೇ ಒಂದು ವರ್ಷದಲ್ಲಿ ಮಾಡುತ್ತಿದ್ದನು. ಮಹಮ್ಮದ ಘಜನಿಯ ಕಾಲದಲ್ಲಿ ನೆಲಸಮವಾಗಿದ್ದ ಶ್ರೀಮಂದಿರವು ಮೊದಲಿನ ಸ್ಥಿತಿಗೆ ಬರದಿದ್ದರೂ ತಕ್ಕಮಟ್ಟಿಗೆ ಉತ್ತಮ ಸ್ಥಿತಿಗೆ ಬಂದಿತ್ತು; ಆದರೆ ಬಹಿರಾಮನು ಪುನಃ ಅದನ್ನು ನೆಲಸಮಮಾಡಿ ಆ ಸ್ಥಳದಲ್ಲಿ ಮಸೀದಿಯನ್ನು ಕಟ್ಟಿಸಬೇಕೆಂದು ಪ್ರಯತ್ನಿಸತೊಡಗಿದನು. ಆಗ ಈ ನರನೂಲಿನಲ್ಲಿ ಗೋವಿಂದದೇವನು ಶ್ರೇಷ್ಠಮನೆತನದವನೂ ಶ್ರೀಮಂತನೂ ಆಗಿದ್ದನು. ಬಹಿರಾಮನ ತುಂಟತನದಿಂದ ಅವನು ಅತ್ಯಂತ ರೋಷಗೊಂಡನು. ಸಜ್ಜನಾಂಗದ ಹಿತಕ್ಕಾಗಿಯೂ ಪುರಾತನ ದೇವಾಲಯದ ಪುನರುತ್ಥಾನಕ್ಕಾಗಿಯೂ ತನ್ನ ದೇಹದಲ್ಲಿ ಪ್ರಾಣವಾಯುವು ಸಂಚರಿಸುವವರೆಗೂ ಹೆಣಗುವೆನೆಂದು ಸ್ವಕೀಯರಿಗೆ ಆಶ್ವಾಸನೆಯನ್ನಿತ್ತು, ದಿಲ್ಲೀಶ್ವರನನ್ನು ಕಾಣುವದಕ್ಕಾಗಿ ದೆಹಲಿಗೆ ನಡೆದನು.

ಗೋವಿಂದದೇವನಿಗೆ ಜೋಧೆಯೆಂಬ ತಂಗಿಯೊಬ್ಬಳಿದ್ದಳು. ಅವಳು ಒಳ್ಳೇ ರೂಪವಂತೆಯೆಂಬುದು ಜಗಜ್ಜನಿತವಾಗಿದ್ದಿತು. ಗೋವಿಂದದೇವನು ಅಕ್ಬರನ ಭೆಟ್ಟಿ ಮಾಡಿ ಮಾತು ಕತೆ ನಡೆಸಿದನು. ಅಕ್ಬರನು ಗೋವಿಂದದೇವನನ್ನು ಯೋಗ್ಯ ಮರ್ಯಾದೆಯಿಂದ ಕಂಡು, ಆತನ ಹೇಳಿಕೆಯನ್ನು ಕೇಳಿದನು. ಇಷ್ಟೇ ಅಲ್ಲ; ಬಹಿರಾಮನ ತಪ್ಪನ್ನು ಅವನು ಸರ್ವತೋಮುಖವಾಗಿ ಒಪ್ಪಿದನು; ಮತ್ತು ಗೋವಿಂದದೇವನು ತಂಗಿಯನ್ನು ತನಗೆ ಕೊಟ್ಟಲ್ಲಿ ನರನೂಲನ್ನೇ ಜಹಗೀರಿಯಾಗಿ ಕೊಡುವೆನೆಂದು ಅಕ್ಬರನು ಗೋವಿಂದದೇವನಿಗೆ ಪರೋಕ್ಷವಾಗಿ ತಿಳಿಸಿದನು. ಗೋವಿಂದ

ದೇವನು ತನ್ನ ತಂಗಿಯನ್ನು ಅಕ್ಬರನಿಗೆ ಕೊಟ್ಟಲ್ಲಿ ನರನೂಲನ್ನೇ ಜಹಗೀರಿಯಾಗಿ ಕೊಡುವನೆಂದೂ ಮುಂದೆ ಹಿಂದೂ ಜಹಗೀರಿಯಾದ ನರನೂಲಿನಲ್ಲಿ ಯವನರ ಉಪದ್ರವವನ್ನು ಕಡಿಮೆ ಮಾಡಿ ಸ್ವಜನಾಂಗಹಿತದ ಜೊತೆಯಲ್ಲಿ ಸಾರ್ವಜನಿಕ ಸೇವೆಯನ್ನೆಸಗಬಹುದೆಂದೂ ಅವನು ತರ್ಕಿಸಿದನು. ಎಷ್ಟೋ ಆರ್ಯಲಲನೆಯರು ವೈಷಯಿಕ ವ್ಯಾಮೋಹಕ್ಕಾಗಿಯೋ ಅಥವಾ ಅಧಿಕಾರ ಲಾಲಸೆಗಾಗಿಯೋ ಯವನ ಜನಾನಖಾನೆಗೆ ಗುರಿಪಟ್ಟಿರಲು, ತನ್ನ ತಂಗಿ-ಜೋಧೆಯನ್ನು ಸಾರ್ವಜನಿಕ ಹಿತಕ್ಕಾಗಿ ಯವನ ಬಾದಶಹನಿಗೆ ಕೊಡುವುದರಲ್ಲಿ ದೋಷವಿಲ್ಲವೆಂದು ಅವನು ಯೋಚಿಸಿದನು. ಸ್ವಾತಂತ್ರ್ಯಧರ್ಮದ ಮುಂದೆ ತನ್ನ ಭಗಿನಿಯನ್ನು ಧರ್ಮಾಂತರಗೊಳಿಸುವ ಕಾರ್ಯವು ಹೆಚ್ಚಿನ ಅಧರ್ಮವಾದದ್ದೆಂದು ಅವನು ಭಾವಿಸಲಿಲ್ಲ. ಪುರಾತನ ದೇವಾಲಯದ ಪುನರುತ್ಥಾನಕ್ಕಾಗಿಯೂ ಹಿಂದೂಜನಾಂಗದ ಅಭ್ಯುದಯಕ್ಕಾಗಿಯೂ ದೊರೆತ ಆ ಸುವರ್ಣಸಂಧಿಯನ್ನು ಸದುಪಯೋಗಪಡಿಸಿಕೊಳ್ಳಬೇಕೆಂದು ಅವನು ಬಗೆದನು. ಆದರೂ ಅವನು ತನ್ನ ತಂಗಿಯ ಮನೀಷೆಯನ್ನು ತಿಳಿಯದೆ ಅಕ್ಬರನಿಗೆ ವಚನಬದ್ಧನಾಗಲಿಲ್ಲ. ಅವನು ಪುನಃ ನರನೂಲಿಗೆ ಬಂದು ಜೋಧೆಯೊಡನೆ ಆಲೋಚನೆ ನಡೆಸಿದನು. ಜೋಧಾಬಾಯಿಯು ಅಕ್ಬರನ ರಾಜ್ಞಿಯಾಗಲಿಕ್ಕೆ ಸಂತೋಷದಿಂದ ಒಡಂಬಟ್ಟಳು. ಕೂಡಲೆ ಗೋವಿಂದದೇವನು ತನ್ನ ತಂಗಿಯನ್ನು ದೆಹಲಿಗೆ ಕಳುಹಿಸಿ, ತಾನು ನರನೂಲಿನ ಜಹಗೀರದಾರನಾದನು.

ನಾರಾಯಣದೇವ, ಹಿಂದುಗಳಲ್ಲಿ ಗುಣಕ್ಕೆ ಬೆಲೆಯಿರುವದಿಲ್ಲ; ನಿಃಸ್ವಾರ್ಥ ಸೇವೆಗೆ ಗೌರವವಿರುವದಿಲ್ಲ. ಗೋವಿಂದದೇವನು ಸಾರ್ವಜನಿಕ ಹಿತಕ್ಕಾಗಿ ತನ್ನ ತಂಗಿಯನ್ನು ಬಾದಶಹನಿಗೆ ಕೊಟ್ಟಿದ್ದರೂ ಸಮಾಜವು ಬಾದಶಹನ ಸಂಬಂಧಿಯಾದ ಆತನನ್ನು ಧರ್ಮಬಾಹಿರನೆಂದು ಭಾವಿಸಿತು. ಸಮಾಜದಿಂದ ಬಹಿಷ್ಕೃತನಾದ ಅವನು ಮನಶ್ಶಾಂತಿಯನ್ನು ಕಳಕೊಂಡಿದ್ದನು. ಹಿಂದುಗಳು ಅವನನ್ನು ದೇವಾಲಯ ಪ್ರವೇಶಮಾಡಗೊಡುತ್ತಿದ್ದಿಲ್ಲ. ಆಗ ಅವನು ತನ್ನ ಉಪಾಸನೆಗಾಗಿ ಬೇರೊಂದು ಮಂದಿರವನ್ನು ಕಟ್ಟಿಸಿಕೊಂಡನು; ಆದರೆ ಅನೈಕ್ಯದ ಬೀಡಾದ ನರನೂಲಿನ ಮೇಲೆ ಬಹಿರಾಮನು ಮತ್ತೆ ಕಣ್ಣು ತಿರುಗಿಸಿದನು. ಅವನು ಗೋವಿಂದದೇವನ ಉಪಾಸ್ಯದೇವತೆಯನ್ನು ಛಿನ್ನ-ವಿಚ್ಛಿನ್ನಮಾಡಿ ದೇವಾಲಯವನ್ನು ಉಧ್ವಸ್ತಗೊಳಿಸಿದನು. ಹಿಂದುಗಳೆಲ್ಲರೂ ಗೋವಿಂದದೇವನ ಮೇಲೆ ಹಲ್ಲುಕಡಿಯುತೊಡಗಿದ್ದರಿಂದ ಬಹಿರಾಮನ ಕಾರ್ಯವು ನಿರ್ವಿಘ್ನವಾಗಿ ನೆರವೇರಿತು. ತರುವಾಯ ಅನೇಕ ದಿನಗಳವರೆಗೆ ಗೋವಿಂದದೇವನು ಬದುಕಿದ್ದನು; ಆದರೆ ಅವನು ತನ್ನ ಜೀವಮಾನಕಾಲದಲ್ಲಿ ಪುನಃ ಯಾವಾಗಲೂ ಕಾಲ್ಪನಿಕ ಮೂರ್ತಿಯನ್ನಿಟ್ಟು ಪೂಜಿಸಲಿಲ್ಲ. ಮನಶ್ಶಾಂತಿಯನ್ನು ಕಳಕೊಂಡಿದ್ದ ಗೋವಿಂದದೇವನಿಗೆ ಅದೇ ಕೊರಗಿನಿಂದಲೇ ಹುಚ್ಚು ಹಿಡಿಯಿತು. ಅವನು ಬುದ್ಧಿಭ್ರಮಣದಿಂದಲೇ ತೀರಿಕೊಂಡನು. ಅವನು ಹಿಂದೂ ಜನಾಂಗದ ಸೇಡುತೀರಿಸಿಕೊಳ್ಳಲಿಕ್ಕೆ ಸಿದ್ಧನಿದ್ದಿದ್ದರೆ, ಈ ನರನೂಲಿನ ಹಿಂದುಗಳೇ

ಏಕೆ, ಹಿಂದುಸ್ಥಾನದ ಅನೇಕ ದೇಗುಲಗಳೂ, ಹಿಂದೂಧರ್ಮವೂ ನಾಮಶೇಷ ವಾಗುವಂತಿತ್ತು; ಆದರೆ ಅವನು ಸೇಡಿನ ಹವ್ಯಾಸಕ್ಕೆ ಬೀಳಲಿಲ್ಲ. ಹಿಂದುಗಳ ಅವಿ ವೇಕತನಕ್ಕಾಗಿಯೂ ಲೈಂಗಿಕ ವೈಷಮ್ಯಕ್ಕಾಗಿಯೂ ಬಹಳವಾಗಿ ಮರುಗಿದನು. ಅವನು ಮೃತ್ಯುಶೆಯ್ಯೆಯಲ್ಲಿ ಮಲಗಿರುವಾಗ ಸಹ, ಹಿಂದುಗಳ ಅವಿವೇಕತನವನ್ನು ಹೋಗಲಾಡಿಸೆಂದು ಪರಮಾತ್ಮನನ್ನು ಪ್ರಾರ್ಥಿಸುತ್ತಾ ಕೀರ್ತಿಶೇಷನಾದನು. ಹೀಗೆ ನಿನ್ನ ಪೂರ್ವಜರ ಚಾರಿತ್ರ್ಯವು ಕಲಂಕವೆಂದು ತಿಳಿದಿರುವಾಗ ವೀರಪಾಲನು ಯದು ಕುಮಾರಿಯನ್ನು ನಿನಗೆ ಎಂದಿಗೂ ಕೊಡಲಾರನು. ನೀನು ಒಂದುವೇಳೆ ಪಾಂಡ್ಯಳದೇವ ನಿಗೆ ದತ್ತಕನಾಗದಿದ್ದಿದ್ದರೆ ವಿರಪಾಲನು ತನ್ನ ಕುಮಾರಿಯನ್ನು ಕೊಡುತ್ತಿದ್ದನೇನೋ ಎನ್ನುವ ಆಶೆಯಿತ್ತು; ಈಗ ಆ ಆಶೆಯೂ ಸಹ ಬಯಲಾಗಿದೆ.''

''ಅಜ್ಜೀ, ನೀವು ಹೀಗೆ ವಿಪರೀತ ಕಲ್ಪನೆ ಮಾಡಬೇಡಿರಿ. ನಾನು ಪಾಂಡ್ಯಳ ದೇವರಿಗೆ ದತ್ತಕನಾಗುವದಕ್ಕೆ ವೀರಪಾಲರೇ ಕಾರಣರಿರುವರು. ಮೊಗಲ ದೊರೆಯಾದ ಸದ್ಯದ ಆಲಂಗೀರನು ಧರ್ಮಾಂಧನೂ ಕ್ರೂರಿಯೂ ಇರುವುದರಿಂದ, ದುಷ್ಟ ಯವ ನರ ಅಬ್ಬರಕ್ಕೆ ಪ್ರೋತ್ಸಾಹ ದೊರೆಯುತ್ತಲಿದೆಯೆಂದೂ, ಜಹಗೀರಿಯು ಹಿಂದುಗಳ ಕೈ ಬಿಟ್ಟು ಹೋದಲ್ಲಿ, ನರನೂಲಿನ ನಾಗರಿಕರು ಬಹುವಿಧವಾದ ಕಷ್ಟ-ನಷ್ಟ-ಭ್ರಷ್ಟತ್ವ ಗಳಿಗೊಳಗಾಗಬೇಕಾಗುವದೆಂದೂ ವೀರಪಾಲರು ನನ್ನೆದುರಿನಲ್ಲಿ ಎಷ್ಟೋ ಸಾರೆ ಹೇಳಿ ರುವರು. ಗೋವಿಂದದೇವರ ಮೊಮ್ಮಕ್ಕಳಾದ ಪಾಂಡ್ಯಳದೇವರು ನಿಸ್ಸಂತಾನರಾಗಿ ರುವದರಿಂದ ಹಿಂದೂ ಜಹಗೀರಿಯು ಎಲ್ಲಿ ಯವನರ ಹಸ್ತಗತವಾಗುವದೋ ಎಂದು ವೀರಪಾಲರು ದುಃಖಿಸುತ್ತಿದ್ದುದನ್ನು ನಾನೇ ಹಲವು ವೇಳೆ ಕಣ್ಣಾರೆ ನೋಡಿರುವೆನು; ಆದರೆ ಅಜ್ಜೀ, ವೀರಪಾಲರು ಧರ್ಮದ ಪ್ರಗತಿಗೆ ಕುಂಠಿತ ಸ್ವರೂಪರಲ್ಲ. ಗೋವಿಂದ ದೇವರು ಹಿಂದುಗಳ ಅಭ್ಯುದಯಕ್ಕಾಗಿಯೂ, ಹಿಂದೂ ದೇಗುಲದ ಅಸ್ತಿತ್ವಕ್ಕಾಗಿ ಯೂ ತಮ್ಮ ಪ್ರೇಮಲ ಭಗಿನಿಯನ್ನು ಬಾದಶಹನಿಗೆ ಕೊಟ್ಟರಲ್ಲದೆ, ಯಾವದೊಂದು ಸ್ವಾರ್ಥಪರಾಯಣತೆಯಿಂದ ಅವರು ರಾಜಸಂಬಂಧಿಕರಾಗಿದ್ದಿಲ್ಲವೆಂಬುದನ್ನು ವೀರ ಪಾಲರೇನೂ ಅರಿಯದವರಲ್ಲ.''

''ಕುಮಾರ, ನಿನ್ನ ಈ ಹುಂಬ ಭಾವನೆಯು ನಿರಾಧಾರವಿರುವುದು. ಹಿಂದೂ ಜಹಗೀರಿಯು ಎಲ್ಲಿ ಯವನರ ಹಸ್ತಗತವಾಗುವದೋ ಎಂದು ವೀರಪಾಲನು ದುಃಖಿ ಸುವುದಕ್ಕೆ ಬೇರೆ ಕಾರಣವಿರುವದು. ಸದ್ಯದ ನಿರಂಕುಶ ಪ್ರಭುತ್ವದಲ್ಲಿ ಆಲಂಗೀ ರನು ಯಾವ ಕಾಲಕ್ಕೆ ಏನು ಮಾಡುವನು? ಎಂದು ಹೇಳಲಾಗುವದಿಲ್ಲ. ಬಾದ ಶಹನ ಕ್ರೂರದೃಷ್ಟಿಯು ತನ್ನ ಮೇಲೆ ಬಿದ್ದಲ್ಲಿ ತನ್ನ ಶ್ರೀಮಂತಿಕೆಗೆ ಕುಂದು ಬರುವ ದೆಂಬ ಶಂಕೆಯು ವೀರಪಾಲನಿಗೆ ಚೆನ್ನಾಗಿ ತಿಳಿದಿರುವುದು. ಅಂತೆಯೇ ಅವನು ಹಿಂದೂ ಜಹಗೀರಿಯು ಹಿಂದುಗಳದಾಗಿಯೇ ಉಳಿಯಬೇಕೆಂದು ಮೇಲಿಂದ ಮೇಲೆ ಅನ್ನುವನಲ್ಲದೆ, ಹಿಂದೂಧರ್ಮಕ್ಕೆ ಲೋಪಬರುವದೆಂಬ ಚಿಂತೆಯು ಅವನಿಗೆ ಸರ್ವ ಥಾಪಿಯಿರುವದಿಲ್ಲ;''

"ಅಜ್ಜ, ವೀರಪಾಲರ ಮನೋಗತವು ಹೇಗೆಯೇ ಇರಲಿ; ಅದರ ವಿಷಯವಾಗಿ ನಾನು ಹೆಚ್ಚು ಹೇಳಲಾರೆನು. ಗೋವಿಂದದೇವರು ಸ್ವಜನಾಂಗದ ಹಿತಕ್ಕಾಗಿ ತಮ ಭಗಿನಿಯನ್ನು ಮತಾಂತರಗೊಳಿಸಿದ್ದರೂ ಹಿಂದುಗಳು ಅವರನ್ನು ದೂರೀಕರಿಸಿದರಲ್ಲವೆ? ಒಳ್ಳೇದು! ಈಗ ನನ್ನನ್ನು ಶುದ್ಧೀಕರಿಸಿ ತಮ್ಮ ಜನಾಂಗದಲ್ಲಿ ಸೇರಿಸಿಕೊಳ್ಳಲು ಸನಾತನಿಗಳಿಗೆ ಶಕ್ಯವಿಲ್ಲವೇನು?"

"ಇಲ್ಲ, ಖಂಡಿತವಾಗಿಯೂ ಬರುವಂತಿಲ್ಲ. ಶುದ್ಧೀಕರಣವು ಹಿಂದುಗಳಲ್ಲಿದ್ದಿದ್ದರೆ ಹಿಂದೂ ಧರ್ಮವು ಏಕೆ ಕೃಶವಾಗುತ್ತಿತ್ತು?"

"ನಾನು ಶುದ್ಧೀಕರಣವು ಹಿಂದುಗಳಲ್ಲಿ ಪ್ರಚಾರವಾಗುವಂತೆ ಮಾಡಿದರೆ, ನನ್ನ ಪ್ರಯತ್ನಕ್ಕೆ ಯಶವು ಲಭಿಸಲಿಕ್ಕಿಲ್ಲವೇನು?"

"ಕುಮಾರ, ನೀನು ಹಾಗೆ ಮಾಡಿದರೆ ನಿನ್ನ ಪ್ರಯತ್ನಕ್ಕೆ ಯಶವು ಲಭಿಸುವದೊತ್ತಟ್ಟಿಗಿರಲಿ, ನೀನು ಇನ್ನೂ ಹೆಚ್ಚಾಗಿ ಜನರ ತಿರಸ್ಕಾರ-ಅವಹೇಲನಗಳಿಗೆ ಪಾತ್ರನಾಗುತ್ತೀ. ವಿಶಾಲಭಾವವಿಲ್ಲದ ಹಿಂದುಗಳು, ನಿನ್ನ ದೃಷ್ಟಿಯಲ್ಲೂ ಸಹ ಸ್ವಾರ್ಥವು ಸಮಾವೇಶವಾಗಿದೆಯೆಂದು ತಿಳಿಯದಿರಲಾರರು."

"ಅಜ್ಜ, ಬೆದರಬೇಡ. ನೀನಂದಂತೆ, ಶುದ್ಧೀಕರಣವನ್ನು ರೂಢಿಗೆ ತರುವುದಕ್ಕೆ ನನ್ನ ಸ್ವಂತದ ಉಪಯೋಗವೇ ಕಾರಣವೆಂದು ಜನರು ಆಡಿಕೊಳ್ಳದಿರಲಾರರು. ನಾನು ಹೇಗೆಯೇ ಇದ್ದು ಯದುಕುಮಾರಿಯನ್ನು ವರಿಸುವೆನು. ಒಂದುವೇಳೆ ಯದುಬಾಲೆಯನ್ನು ವಿವಾಹವಾಗುವುದು ನನಗೆ ಸಾಧ್ಯವಾಗದಿದ್ದರೆ ಅವಳನ್ನು ಎಂದೂ ಬೇರೆಯವರ ಹಸ್ತಗತ ಮಾಡಲಿಕ್ಕಿಲ್ಲ. ಬೇರೆಯವರ ಹಸ್ತಗತವಾದರೂ ಅವಳ ಸುಖಭೋಗವು ಅನ್ಯರಿಗೆ ದೊರೆಯದಂತೆ ಮಾಡುವೆನು. ಇಷ್ಟಾದರೂ ಆ ಕುಮಾರಿಯು ತನ್ನ ನಿಶ್ಚಯವನ್ನು ಮರೆತು ಪರಪುರುಷನ ಶಯ್ಯಾಭಾಗಿನಿಯಾಗುವದಾದರೆ ಅಂಥ ಅಧರ್ಮ-ಪಾತಕಿ ಹೆಂಗಸಿನ ರುಂಡವನ್ನು ಇದೋ, ಈ ಕತ್ತಿಯಿಂದ ತುಂಡರಿಸಿ ಚಲ್ಲುವೆನು. ಇದೇ ನನ್ನ ಅಂತ್ಯದ ಗುರಿಯು!"

## ಕೋಮುವಾರ ವರ್ತನದ ಬೀಭತ್ಸ ದೃಶ್ಯ!

ನರನೂಲಿನ ಉತ್ತರಕ್ಕೆ ಎರಡು ಕ್ರೋಶ ಅಂತರದಲ್ಲಿನ ಸೋಮುಕವನವು ವೀರಪಾಲನ ಜನ್ಮಭೂಮಿಯು. ವೀರಪಾಲನಿಗೆ ಇಬ್ಬರು ರೂಪವತಿಯರಾದ ಕನ್ಯೆಯರಿದ್ದು, ಹಿರಿಯವಳಾದ ಮಾಧವಿಯು ಈಗ್ಗೆ ಕೆಲವು ದಿನಗಳ ಮುಂಚೆಯೇ ಇಲ್ಲದಂತಾಗಿದ್ದಳು. ಮಾಧವಿಯು ಸೋಮುಕವನದ ಸಮೀಪದಲ್ಲಿಯೇ ಎಲ್ಲಿಯೋ ಅದೃಶಳಾಗಿರುವಳೆಂದು ಅನೇಕರು ಭಾವಿಸಿದ್ದರು. ಕೆಲವು ಕಾರಣಗಳ ಮೂಲಕ ಅವಳು ಯಾವದೊಂದು ಹಿಂಸ್ರಪಶುವಿನ ಭಕ್ಷ್ಯಸ್ಥಾನಕ್ಕೆ ಗುರಿಯಾಗಿರುವುದೇ ನಿಜವೆಂದು ವೀರಪಾಲನು ಅನ್ನುತ್ತಿದ್ದನು. ಒಮ್ಮೊಮ್ಮೆ ಅವನು ಆ ವನ್ಯಪಶುವಿನ ಪತ್ತೆ

ಹಚ್ಚಿ ಅದರ ಪಾರುಪತ್ಯ ಮಾಡಬೇಕೆಂದು ಹೊರಟನೆಂದರೆ, ತಿಂಗಳು-ಹದಿನೈದು ದಿನದ ವರೆಗೂ ಹಿಂದಿರುಗುತ್ತಿದ್ದಿಲ್ಲ.

ವೀರಪಾಲನು ಶೂರನಿದ್ದನು; ಆದರೆ ಅವನು ಅತ್ಯಂತ ಸ್ವಾರ್ಥಸಾಧಕನಾಗಿದ್ದನು. ಧರ್ಮಾಂಧನಾದ ಔರಿಂಗಜೇಬನಿಗೂ ಸ್ವಾರ್ಥದ ಮೂರ್ತಿಯಾದ ವೀರಪಾಲನಿಗೂ ಮೊದಲಿನಿಂದಲೂ ದ್ವೇಷವಿದ್ದಿತು. ತಾನು ಬಿಜಾಪುರದ ಇಸ್ಮಾಯಿಲ ಆದಿಲಶಾಹಿಯ ಆಶ್ರಯವನ್ನು ಪಡೆದು ಈ ಮೊಗಲ ಮುಕುಟಾಧಿಪನ ಸಿಂಹಾಸನವನ್ನು ಬುಡಮೇಲು ಮಾಡುವೆನೆಂದು ವೀರಪಾಲನು ಅನೇಕರೆದುರಿನಲ್ಲಿ ಹೇಳಹತ್ತಿದ್ದನು ಬಿಜಾಪುರದ ಸುಲ್ತಾನನ ಆಶ್ರಯವನ್ನು ಪಡೆದಿದ್ದ ವೀರಪಾಲನನ್ನು ಕೆಣಕುವುದಕ್ಕೆ ಔರಿಂಗಜೇಬನಾದರೂ ಹಿಂದುಮುಂದು ನೋಡತೊಡಗಿದ್ದನು.

ನಾರಾಯಣದೇವನು ವೀರಪಾಲನನ್ನು ಕಂಡು ಮಾತನಾಡಬೇಕೆಂದು ಬಗೆದು ಸೋಮುಕವನಕ್ಕೆ ಬಂದಿದ್ದನು. ಅವನು ವೀರಪಾಲನ ಮನೆಗೆ ಬಂದಾಗ ವೀರಪಾಲನು ಮನೆಯಲ್ಲಿದ್ದಿಲ್ಲ. ಅವನು ಈಗ್ಗೆ ನಾಲ್ಕೈದು ದಿನಗಳ ಹಿಂದೆಯೇ ವಿಜಾಪುರಕ್ಕೆ ಹೋಗಿರುವನೆಂದು ಯದುಕುಮಾರಿಯ ಮುಖಾಂತರವಾಗಿ ತಿಳಿಯಿತು. ವೀರಪಾಲನು ಇನ್ನು ಐದಾರು ದಿನಗಳಲ್ಲಿಯೇ ಬರುವೆನೆಂದು ಹೇಳಿ ಹೋಗಿರುವುದರಿಂದ, ಇವತ್ತು ನಾಳಿನಲ್ಲಿಯೇ ಬರಬಹುದೆಂದು ಯದುಕುಮಾರಿಯು ನುಡಿದಳು. ವೀರಪಾಲನನ್ನು ಕಂಡು ಮಾತನಾಡದ ಹೊರತು ನಾರಾಯಣದೇವನ ಮನಸ್ಸು ಸ್ತಿಮಿತವಾಗುವಂತಿದ್ದಿಲ್ಲ. ಅವನು ತನ್ನ ಭಾವೀ ಶ್ವಶುರನೊಡನೆ ಮಾತುಕತೆ ನಡೆಸಿಯೇ ತನ್ನ ಭವಿಷ್ಯಜ್ಜೀವನ ಸಮಸ್ಯೆಯ ಚಿತ್ರವನ್ನು ರಚಿಸಬೇಕಾಗಿದ್ದಿತು

ನಾರಾಯಣದೇವನು ಸೋಮುಕವನಕ್ಕೆ ಬಂದು ಇಂದಿಗೆ ಒಂದು ವಾರವಾಗಿದ್ದಿತು. 'ಇವತ್ತು ಬಂದಾನು; ನಾಳೆ ಬಂದಾನು; ಮಧ್ಯಾಹ್ನಕ್ಕೆ ಬಂದೇ ತೀರುವನು' ಎಂದು ಯೋಚಿಸಿ, ಯೋಚಿಸಿ ಹಣ್ಣಾಗಿದ್ದನು. ಒಮ್ಮೆ ಅವನು ನಿರಾಶನಾಗಿ ಇಂದು ಮಧ್ಯಾಹ್ನ ಊಟ ಮಾಡಿ ಹೊರಟೇ ತೀರಬೇಕೆಂದು ಆಲೋಚಿಸುವನು. ಮರು ಕ್ಷಣದಲ್ಲಿಯೇ ಆತುರವು ಕೆಲಸದ್ದಲ್ಲವೆಂದು ಸುಮ್ಮನಾಗುವನು. ಹೀಗೆ ಒಂದೆರಡು ದಿನಗಳು ಕಳೆದವು; ಆದರೂ ವೀರಪಾಲನು ಬಾರದ್ದರಿಂದ ಆತನನ್ನು ಮತ್ತೊಮ್ಮೆ ಕಾಣಬಹುದೆಂದು ಯೋಚಿಸಿ ನಾರಾಯಣದೇವನು ಪ್ರಯಾಣಸಿದ್ಧನಾದನು; ಆದರೆ ನಾರಾಯಣದೇವನು ಹೊರಡಬೇಕೆನ್ನುವಷ್ಟರಲ್ಲಿಯೇ ವೀರಪಾಲನು ಸೋಮುಕವನದ ದಾರಿಯಲ್ಲಿರುವನೆಂಬ ಸಮಾಚಾರವು ಆತನಿಗೆ ಹತ್ತಿತು.

ವೀರಪಾಲನು ಮನೆಗೆ ಬಂದಾಗ ನಾರಾಯಣದೇವನು ಹೊರಗಿನ ಕೈದೋಟದಲ್ಲಿ ಸುತ್ತಾಡುತ್ತಿದ್ದನು. ನಾರಾಯಣದೇವನನ್ನು ನೋಡಿದ ಕೂಡಲೆ ವೀರಪಾಲನು ವಿಸ್ಮಯಗೊಂಡನು. ಉತ್ತರಕ್ಷಣದಲ್ಲಿಯೇ ಅವನ ತಲೆಯಲ್ಲಿ ಬೇರೊಂದು ವಿಚಾರವು ಹುಟ್ಟಿತು. ತಾನಿಲ್ಲದ ವೇಳೆಯಲ್ಲಿ ನಾರಾಯಣದೇವನು ಏಕೆ ಬಂದಿರುವನೆಂಬ ಸಮಾಚಾರವು ಆತನ ಮನಸ್ಸಿನಲ್ಲಿ ಮೂಡಲು, ಅವನು ಸಂತಾಪಮಗ್ನ

ನಾದನು. ವೀರಪಾಲನು ಸಿಟ್ಟುಬೆಂಕಿಯಾದುದರಿಂದ ತನ್ನ ಪ್ರಯಾಣದ ದಣುವನ್ನು ಕೂಡ ಅನುಲಕ್ಷಿಸಿ ನಾರಾಯಣದೇವನನ್ನು ಕುರಿತು: "ನಾರಾಯಣದೇವ, ನಾನು ಇದುವರೆಗೆ ನಿನ್ನನ್ನು ಒಳ್ಳೇ ಸುಗುಣಶಾಲಿಯೆಂದು ಎಣಿಸಿದ್ದೆನು; ಆದರೆ ನೀನು ಅಧಮರಲ್ಲಿ ಅಧಮನಿರುವೆ. ಯದುಬಾಲೆಗೂ ನಿನಗೂ ಇರುವ ಪ್ರಣಯದ ರೂಪವನ್ನು ನಾನೇನು ಅರಿಯದವನೆಂದು ತಿಳಿದಿರುವೆಯೇನು? ನೀನು ಹೀಗೆ ಏಕಾಂತವಾಗಿ ನಾನಿಲ್ಲದ ವೇಳೆಯಲ್ಲಿ ಬಂದು ನಿನ್ನ ಗುಣವನ್ನು ಒರೆಗೆ ಹಚ್ಚಿ ತೋರಿಸುತ್ತಿರುವೆ. ಯದುಬಾಲೆಯನ್ನು ಶೀಲಭ್ರಷ್ಟಮಾಡಲಿಕ್ಕೆ ನೀನು ಯತ್ನಿಸತೊಡಗಿರುವೆಯೆಂಬುದು ನಿನ್ನ ಈ ವರ್ತನದಿಂದ ಸ್ಪಷ್ಟವಾಗದಿರದು; ಆದರೆ ಇದರ ಪರಿಣಾಮವು ನೆಟ್ಟಗಾಗದೆಂದು ತಿಳಿ"

"ವೀರಪಾಲರೆ!" ನಾರಾಯಣದೇವನು ಶಾಂತಮುದ್ರೆಯಿಂದ:-"ನೀವು ತೀರ ಅನುಚಿತ ಮಾತನಾಡತೊಡಗಿರುವಿರಿ. ನಿಮ್ಮ ಕುಮಾರಿಯನ್ನು ಶೀಲಭ್ರಷ್ಟಮಾಡಿ ಇಹ-ಪರಗಳಲ್ಲಿ ಅಪಕೀರ್ತಿಯನ್ನು ಗಳಿಸುವಂಥ ಹೀನಕೋಟಿಯೊಳಗಿನವನು ನಾನಿರುವದಿಲ್ಲ. ನಿಮ್ಮೊಡನೆ ಎರಡು ಮಾತನಾಡಬೇಕೆಂಬ ಸದುದ್ದೇಶದಿಂದ ಇಲ್ಲಿಗೆ ಬಂದೆನಲ್ಲದೆ, ನಿಮ್ಮ ಕುಮಾರಿಯ ಶೀಲಾಪಹಾರಕ್ಕಲ್ಲವೆಂಬುದನ್ನು ಸ್ಪಷ್ಟವಾಗಿ ತಿಳಿಯಿರಿ. ಇಷ್ಟರಿಂದಲೇ ನೀವು ನನ್ನ ಮೇಲೆ ಇಲ್ಲದ ಆರೋಪವನ್ನು ಹೊರಿಸುವದಾದರೆ, ಅದಕ್ಕೆ ನಾನೇನು ಮಾಡಲಿ? ದೋಷೈಕ ದೃಷ್ಟಿಯವರಾದ ನಿಮಗೆ ನಿರ್ದೋಷಗಳು ಸಹ ದೋಷವಾಗಿ ಕಂಡರೆ ಅದರಲ್ಲಿ ನನ್ನ ಅಪರಾಧವೇನಿರುವದು? ನೀವು ವಿಜಾಪುರಕ್ಕೆ ಹೋಗಿದ್ದರಿಂದ ನಾನು ಇಷ್ಟು ದಿನ ನಿಮ್ಮ ಹಾದಿ ಕಾಯಬೇಕಾಯಿತು. ಇದರಿಂದ ನೀವು ನನ್ನನ್ನು ಅವಿಧೇಯನೆಂದಾಗಲಿ, ಅವಿವೇಕಿಯೆಂದಾಗಲಿ ತಿಳಿದರೆ, ಹಾಗೆ ತಿಳಿಯಬಾರದೆಂದು ಬಿನ್ನೈಸಿಕೊಳ್ಳುವೆನು. ನೀವಿಲ್ಲದ ವೇಳೆಯಲ್ಲಿ ನಿಮ್ಮ ಗೃಹದಲ್ಲಿ ನನ್ನ ವಸತಿಯನ್ನೇರ್ಪಡಿಸಿದ್ದಕ್ಕಾಗಿ, ಬೇಕಾದರೆ ನಾನು ನಿಮ್ಮ ಕ್ಷಮೆಯನ್ನು ಯಾಚಿಸುವೆನು."

"ನಾರಾಯಣದೇವ, ನೀನು ಒಳ್ಳೇ ನುಣುಪಾದ ಮಾತನಾಡತೊಡಗಿರುವೆ. ನಿನ್ನಂಥ ನೆಕ್ಕಿ ಕೊಲ್ಲುವವರನ್ನು ನಾನು ಅನೇಕರನ್ನು ನೋಡಿರುವೆನು. ಇಂದು ನೀನು ನಮ್ಮ ಮನೆಯಲ್ಲಿದ್ದುದಕ್ಕಾಗಿ ಕ್ಷಮೆಯನ್ನು ಯಾಚಿಸಿದರೆ, ನಾಳೆ ಯದುಕುಮಾರಿಯು ಗರ್ಭವತಿಯಾದುದಕ್ಕಾಗಿಯೂ ಕ್ಷಮೆಯನ್ನು ಬೇಡುವೆ. ಮುಂದೆ ನನ್ನ ಪುತ್ರಿಯು ಚಾರಿತ್ರ್ಯದೋಷಳೆಂದು ಹೆಸರುಗೊಂಡರೆ, ಆಗ ಅದಕ್ಕಾಗಿಯೂ ಕ್ಷಮೆಯನ್ನು ಕೇಳುವೆ. ಅಂತೂ ಕ್ಷಮೆಯನ್ನು ಯಾಚಿಸಿಯಾದರೂ ಕಾರ್ಯಸಾಧನೆ ಮಾಡಿಕೊಳ್ಳುವದರಲ್ಲಿ ನಿಮ್ಮ ಮನೆತನದವರು ಒಳ್ಳೇ ನಿಪುಣರಿದ್ದಂತೆ, ನಿನ್ನ ಸ್ಥಿತಿಯಾದರೂ ಇರುವುದು."

ವೀರಪಾಲನ ಅಸಭ್ಯಜನೋಚಿತವಾದ ಆ ಮಾತಿನಿಂದ ನಾರಾಯಣದೇವನು ಬಹಳ ರೋಷಗೊಂಡನು. ಅವನು ಅತ್ಯಂತ ಮಾನೀ ಸ್ವಭಾವದವನಿದ್ದನು.

ಅವನು ಒಬ್ಬ ಸಾಧಾರಣತರದ ಜಹಗೀರದಾರನಾಗಿದ್ದರೂ, ಅವನ ಅಸಾಧಾರಣ ರಾಜಕಾರಣ ಪಟುತ್ವವನ್ನೂ, ಅಮಾನುಷವಾದ ವ್ಯೂಹರಚನಾಶಕ್ತಿಯನ್ನೂ, ಅಪೌರುಷೇಯವಾದ ತೀಕ್ಷ್ಣಬುದ್ಧಿಯನ್ನೂ, ಅಲೌಕಿಕವಾದ ತೇಜಸ್ಸನ್ನೂ, ಅಖಂಡ ಧೈರ್ಯವನ್ನೂ ನೋಡಿದರೆ, ಅವನನ್ನು ಸರಿಗಟ್ಟುವ ವಿರಾಗ್ರಣಿಯು ಆಗಿನ ಕಾಲದಲ್ಲಿ ಮತ್ತೊಬ್ಬನಿದ್ದಿಲ್ಲ. ಅವನು ಯೋಗ್ಯ ಸಿದ್ಧತೆಯಿಂದ ಭಾರತವರ್ಷದ ಸಾಮ್ರಾಟನಾದ ಆಲಂಗೀರ ಬಾದಶಹನ ಎದುರು ನಿಂತು ತನ್ನ ಪೂರ್ಣ ಶಕ್ತಿಯನ್ನು ಪ್ರಯೋಗಿಸಿದ್ದರೆ, ಮುಂದೆ ಶಿವಛತ್ರಪತಿಗೆ ಎದುರಾಗಿ ನಿಲ್ಲುವುದಕ್ಕೆ ಔರಂಗಜೇಬನು ಉಳಿಯುತ್ತಿದ್ದನೋ ಇಲ್ಲವೋ ಎಂಬುದನ್ನು ಹೇಳಲಿಕ್ಕೆ ಬರುವಂತಿದ್ದಿಲ್ಲ. ನಾರಾಯಣದೇವನಿಗೆ ಆರು ಜನ ಅಣ್ಣ-ತಮ್ಮಂದಿರಿದ್ದು, ಅವರಲ್ಲೆಲ್ಲಾ ನಾರಾಯಣದೇವನೇ ನಡುವಿನವನಾಗಿದ್ದನು. ಆತನ್ನುಳಿದ ಆರುಜನ ಅಣ್ಣತಮ್ಮಂದಿರೂ ಅಕಾಲ ಮೃತ್ಯುವಿಗೆ ತುತ್ತಾಗಿದ್ದರು. ನಡುವಿನವನಾದ ನಾರಾಯಣದೇವನ ಗುಣಗಳಿಗಾಗಿ ಪಾಂಡ್ಯಳದೇವನು ಆತನನ್ನು ದತ್ತಕ ಮಾಡಿಕೊಂಡಿದ್ದನು. ಮೊದಲೇ ವೀರಾಗ್ರೇಸರನಾದ ನಾರಾಯಣದೇವನು, ಜಹಗೀರಿಯೊಡೆಯನಾದಂದಿನಿಂದ ಮತ್ತಿಷ್ಟು ವೀರಾಗ್ರಣಿಯಾಗಿ ಮೆರೆಯತೊಡಗಿದ್ದನು. ಮುಂದೆ ಕೆಲವು ಕಾಲದಲ್ಲಿಯೇ ಪಾಂಡ್ಯಳದೇವನು ತೀರಿಕೊಂಡಿದ್ದರಿಂದ, ನಾರಾಯಣದೇವನೇ ಜಹಗೀರಿಯ ಸರ್ವಸೂತ್ರಾಧಿಕಾರಿಯಾಗಿದ್ದನು. ಬರಿಯ ನರನೂಲಿನಲ್ಲಿಯೇ ನಾರಾಯಣದೇವನ ಮಾತು ನಡೆಯುತ್ತಿದ್ದಿತೆಂತಲ್ಲ. ಇಡೀ ಕರ್ನಾಟಕದಲ್ಲೆಲ್ಲ ಆತನ ಕೀರ್ತಿಯು ಹಬ್ಬಿತ್ತು. ಸಮಗ್ರ ಆರ್ಯಾವರ್ತವು ಯವನಮಯವಾದ ಆ ಯಾವನೀ ವಾತಾವರಣದಲ್ಲಿಯೂ ಸಹ ಅನೇಕ ಹಿಂದುಗಳು ಯವನ ಸಿಂಹಾಸನ ಪ್ರತಿಷ್ಠಾಪನಾಚಾರ್ಯರೆಂದು ಬಾದಶಹನಿಂದಲೂ ಸುಲ್ತಾನರಿಂದಲೂ ಅನ್ನಿಸಿಕೊಳ್ಳುವದಕ್ಕಾಗಿ ಮುಹಮ್ಮದೀಯರಿಗೆ ಸಹಾಯಕರಾಗಿದ್ದರು. ಆ ಕಾಲದಲ್ಲಿ ಪ್ರಜಾಸ್ವಾತಂತ್ರ್ಯವನ್ನು ಬಯಸುವ ವೀರರೆಂದರೆ, ಅಂಥವರು ಕೇವಲ ಅಲ್ಪ ಸಂಖ್ಯೆಯುಳ್ಳವರಾಗಿದ್ದರು. ನಾರಾಯಣದೇವನು ಬಾದಶಹನ ಅಥವಾ ಸುಲ್ತಾನನ ಬೆದರಿಕೆಗೆ ಸೊಪ್ಪುಹಾಕುವವನಿದ್ದಿಲ್ಲ ಸದ್ಯದ ಈ ಇಪ್ಪತ್ತನೆಯ ಶತಮಾನದಲ್ಲಿ ವಾಚಕರಿಗೆ ಆತನ ನೆನಪು ಮಾಡಿಕೊಡುವದಾದರೆ, ರಷ್ಯದ ರಹಸ್ಯಭೇದಕ ಸೈನ್ಯದ ನಾಯಕನಾದ ಗ್ರಿಗೇರಿ ಯುಗಾಡೋನ ಪೂರ್ವಪ್ರತಿಬಿಂಬವೇ ಆದಾಗಿತ್ತೆಂದು ಹೇಳಬಹುದು. ಇರಲಿ.

ವೀರಪಾಲನ ಮಾತಿನಿಂದ ನಾರಾಯಣದೇವನು ಸಿಟ್ಟಿಗೆದ್ದನು; ಆದರೂ ಅವನು ತನ್ನ ಸಿಟ್ಟನ್ನು ನುಂಗಿಕೊಂಡು:-"ವೀರಪಾಲರೆ, ನೀವು ಹೀಗೆ ಅನ್ಯ ಕಲ್ಪನೆ ಮಾಡಬೇಡಿರಿ. ನಾನು ನಿಮ್ಮ ಕುಮಾರಿಯ ಶೀಲಾಪಹರಣವನ್ನು ಕಾಲತ್ರಯದಲ್ಲಿಯೂ ಮಾಡಲಾರೆನು. ನನ್ನಲ್ಲಿ ನಿಮ್ಮ ನಂಬಿಗೆಯು ಸಂಪೂರ್ಣವಾಗಿರದಿದ್ದರೂ, ಯದುಬಾಲೆಯ ವಿಷಯವಾಗಿದ್ದ ನಿಮ್ಮ ನಂಬಿಗೆಯು ಈಗ ಸಂಪೂರ್ಣವಾಗಿ ನಾಶವಾಗಿರುವದೇನು? ಸರಳ ಮನಸ್ಸಿನ ಪ್ರಮದೆಯ ಮೇಲೂ ನೀವು ದೋಷಾರೋಪ

ಮಾಡುವದಾದರೆ ಅದನ್ನು ಅವಿಚಲಿತ ಹೃದಯದ ಕುಮಾರಿಯು ಹೇಗೆ ಸಹಿಸಬಲ್ಲಳು! ನಿಮ್ಮ ಕುಮಾರಿಯನ್ನು ನಾನು ವಿವಾಹವಾಗಬೇಕೆಂದಿರುವದೇನೋ ನಿಜವು. ಅದಕ್ಕಾಗಿ ನಿಮ್ಮ ಒಪ್ಪಿಗೆಯನ್ನು ಪಡೆಯುವ ಸಲುವಾಗಿಯೇ ನಾನು ಇಲ್ಲಿಯವರೆಗೆ ಬಂದಿರುವೆನು. ಯದುಕುಮಾರಿಯನ್ನು ನನಗೆ ಕೊಡುವ ವಿಷಯದಲ್ಲಿ ನಿಮ್ಮ ಮನೋಗತವನ್ನು ತಿಳಿಸಿರಿ."

"ನಾರಾಯಣದೇವ, ಮತ್ತೆ ಮತ್ತೆ ಆಡಿದ ಮಾತುಗಳನ್ನೇ ಆಡಿ ಮಲಗಿದ ಕಾಳಭುಜಂಗವನ್ನು ಎಬ್ಬಿಸತೊಡಗಿರುವಿಯಾ? ನಿನ್ನ ಮಾತುಗಳು ಕಾದ ಪಾದರಸದಂತೆ ನನ್ನ ಕಿವಿಯಲ್ಲಿ ನುಗ್ಗತೊಡಗುವವು. ನಿನ್ನ ಮನೋಭಾವನೆಯನ್ನು ನಾನು ಸಂಪೂರ್ಣವಾಗಿ ಅರಿತಿರುವೆನು. ಧರ್ಮಭ್ರಷ್ಟನೂ ಕುಲಗೋತ್ರಹೀನನೂ ಆದ ನಿನ್ನನ್ನು ಯದುಕುಮಾರಿಯು ಯಾವ ಮುಖದಿಂದ ವರಿಸಬೇಕು? ನಿನ್ನಂಥ ನೀಚಕುಲೋತ್ಪನ್ನನಿಗೆ ಯಾವ ಕುಲೀನನು ತನ್ನ ಮಗಳನ್ನು ಕೊಟ್ಟಾನು? ನಾನು ನಿನ್ನೊಡನೆ ಸಂಬಂಧವನ್ನಿಟ್ಟರೆ ನನ್ನ ಆಪ್ತೇಷ್ಟರು ನನ್ನನ್ನು ದೂಷಿಸಲಿಕ್ಕಿಲ್ಲವೆ? ಬಂಧು ಬಾಂಧವರು ನನ್ನ ಬಳಿಕೆಯನ್ನು ಬಿಡಲಿಕ್ಕಿಲ್ಲವೆ? ಸಜಾತಿಯವರು ನನ್ನನ್ನು ತಿರಸ್ಕರಿಸಲಿಕ್ಕಿಲ್ಲವೆ? ಅಂದಮೇಲೆ ಯಾವ ಆಶೆಯಿಂದ ನನ್ನ ಮಗಳನ್ನು ನಿನಗೆ ಕೊಡಬೇಕು? ನೀನು ಅವಿಚಾರಿಯಾಗಿ ಮುಂದೆ ನುಗ್ಗಿ ಹೀಗೆ ಮಾತನಾಡತೊಡಗಿರುವೆ. ಈ ವೀರಪಾಲನೆದುರಿನಲ್ಲಿ ಇಂಥ ಎಚ್ಚರಗೇಡಿತನದ ಮಾತುಗಳನ್ನು ಇನ್ನು ಮುಂದೆ ಆಡಬೇಡ, ತಿಳಿಯಿತೆ?"

ವೀರಪಾಲನ ಸ್ಪಷ್ಟ ಭಾಷಣದಿಂದ ನಾರಾಯಣದೇವನು ಕ್ರುದ್ಧನಾದನು. ಅವನ ತಿರಸ್ಕಾರಯುಕ್ತ ಮಾತುಗಳು ನಾರಾಯಣದೇವನ ಶಾಂತತೆಯನ್ನು ಭಂಗಗೊಳಿಸಿದುವು. ವೀರಪಾಲನ ಮಾತಿನಿಂದ ಅವನ ಮೊದಲಿನ ವಿಚಾರವೆಲ್ಲವೂ ಲುಪ್ತವಾಯಿತು. ತನ್ನ ಅಪಮಾನಕ್ಕೆ ಕಾರಣಭೂತವಾದ ಹಿಂದೂ ಜನಾಂಗದ ಅಂಧಾಭಿಮಾನವನ್ನು ಹೋಗಲಾಡಿಸುವದು ದುಸ್ಸಾಧ್ಯವೆಂದು ಅವನು ತಿಳಿದನು. ತನ್ನ ಅಭೂತಪೂರ್ವ ಶಕ್ತಿಯನ್ನು ಯವನರ ಮೇಲೆ ಪ್ರಯೋಗಿಸುವದಕ್ಕಿಂತಲೂ ಕೋಮುವಾರ ಪ್ರೇತನರ್ತನ ನಡೆಯುತ್ತಿರುವ ಹಿಂದೂ ನಾಟ್ಯರಂಗದಲ್ಲಿ ಪ್ರಯೋಗಿಸಿದರೆ ತನ್ನಲ್ಲಿಯ ಮಾನವತ್ವಕ್ಕೆ ಹೆಚ್ಚಿನ ಬೆಲೆಯಿದೆ, ಎಂದು ಅವನು ತರ್ಕಿಸಿದನು. ಎಷ್ಟೋ ವೇಳೆಯ ವರೆಗೆ ಅವನು ಹೀಗೆ ಆಲೋಚಿಸುತ್ತ ಮಂಕು ಹಿಡಿದವನಂತೆ ಸುಮ್ಮನೆ ಕುಳಿತುಬಿಟ್ಟಿದ್ದನು. ಅವನ ತಲೆಯಲ್ಲಿ ವಿಚಾರಸರಣಿಯು ಒಂದೇಸವನೆ ಬರಲಾರಂಭಿಸಿತ್ತು. ಬಹಳ ವೇಳೆಯ ಮೇಲೆ ಅವನ ಮುಖದಿಂದ:—

"ಹಾ! ವೀರಪಾಲ, ಇಂದು ನಾನು ನಿನ್ನ ಗುರುತರವಾದ ನೀಚ ಹೃದಯದ ಪಡಿಕಟ್ಟನ್ನು ಚೆನ್ನಾಗಿ ಅರಿತೆನು. ನನ್ನೊಡನೆ ಸಂಬಂಧವನ್ನಿಟ್ಟರೆ ನಿನ್ನ ಕುಲಗೋತ್ರದವರೂ, ಬಂಧು-ಬಾಂಧವರೂ ನಿನ್ನನ್ನು ತಿರಸ್ಕರಿಸುವರಲ್ಲವೆ? ನಿನ್ನ ಬಳಿಕೆಯನ್ನು ಬಿಡುವರಲ್ಲವೆ? ನಿನಗೆ ಮನುಷ್ಯನ ಸದ್ಗುಣಗಳಿಗಿಂತಲೂ ಆಪ್ತೇಷ್ಟರ ತಿರಸ್ಕಾರವು

ಹೆಚ್ಚಿನದೆಂದು ತೋರುವದಲ್ಲವೆ? ನಡೆಯಲಿ, ವೀರಪಾಲ, ನಿಮ್ಮ ಕೀಳು-ಮೇಲಿನ ಪಿಶಾಚನರ್ತನವು ಸಾಂಗವಾಗಿ ನಡೆಯಲಿ. ನಿಮ್ಮಂಥ ಬಹುಕೃತವೇಷಧಾರಿಗಳಿರುವವರೆಗೂ ಹಿಂದೂ ಜನಾಂಗದಲ್ಲಿ ಏಕಮತೀಯತೆಯೂ ಏಕಭಾವಾವೇಶವೂ ನೆಲೆಗೊಳ್ಳಲಾರವು. ಜನಾಂಗದ ಒಡಕಿಗೆ ಕಾರಣಭೂತರಾದ ನಿಮ್ಮ ಸ್ಥಿತಿಯು ಮುಂದೆ ಏನಾಗುವದೆಂಬುದನ್ನು ನಿಮ್ಮಂಥ ಸ್ವಾರ್ಥಿಗಳಿಗೆ ಹೇಗೆ ತಿಳಿಯಬೇಕು? ಅನೈಕ್ಯದ ಬೀಡಾದ ಸನಾತನಿಗರ ಈ ಪ್ರಭೇದವು ಹಿಂದೂ ಧರ್ಮವನ್ನು-ಹಿಂದೀಯರ ಸ್ವಾತಂತ್ರ್ಯವನ್ನು ನಾಶಮಾಡಬೇಕೆಂಬ ಪ್ರಬಲಾಕಾಂಕ್ಷಿ ಯವನರ ಆಶೆಯು ಶೀಘ್ರದಲ್ಲಿಯೇ ನೆರವೇರುವದಕ್ಕೆ ಕಾರಣವೆಂದು ತಿಳಿಯಿರಿ. ಒಡಕಿನಿಂದ ದುರ್ಬಲವಾದ ಹಿಂದೂ ಜನಾಂಗದ ಮೇಲೆ ವಿಧರ್ಮೀಯರ ಧಾರ್ಮಿಕ ದಾಳಿಯು ನಡೆದಾಗ ನಿಮ್ಮ ಧರ್ಮವು ಒಳಿತಾಗಿ ಉನ್ನತ ಸ್ಥಿತಿಗೆ ಬರುವದಲ್ಲವೆ? ಸ್ವಾತಂತ್ರ್ಯಹೀನರಾದ ಹಿಂದೀಯರೆದುರಿನಲ್ಲಿ ನಮ್ಮ ಪೂಜ್ಯ ದೈವತವಾದ ಗೋವಧೆಯನ್ನು ಮಾಡುವಾಗ ಹಿಂದೂ ಧರ್ಮಕ್ಕೆ ಒಳ್ಳೇ ಕಳೆಯೇರುವದಲ್ಲವೆ? ಸನಾತನ ಧರ್ಮಾನುಯಾಯಿಗಳು ಧರ್ಮಸೂತ್ರವನ್ನು ಪಠಿಸದಂತೆ ಮಾಡಿ ಅವರ ಹೆಂಡಿರು ಮಕ್ಕಳನ್ನು ಎಳೆದೊಯ್ಯುವಾಗ ಹಿಂದೂ ಧರ್ಮವು ನಕ್ಕು ನಲಿಯುತ್ತಿರಬಹುದಲ್ಲವೇ? ವೀರಪಾಲ, ನಿಮ್ಮ ಧರ್ಮದ ಹೋಕೆಯನ್ನು ನಾನೇನು ಅರಿಯದವನಿಲ್ಲ. ವಿಜಾಪುರದ ಇಸ್ಮಾಯಿಲ ಶಹನಿಗೆ ನಿಮ್ಮ ಪುತ್ರಿಯನ್ನು ಕೊಟ್ಟು ಚಿರಸುಖಿಗಳಾಗಬೇಕೆಂಬ ನಿಮ್ಮ ಆಕಾಂಕ್ಷೆಯು ನನಗೆ ತಿಳಿದಿರುವುದು. ನೆರವೇರಲಿ, ನಿಮ್ಮ ಆಶಯವು ನಿರ್ವಿಘ್ನವಾಗಿ ನೆರವೇರಲಿ; ಆದರೆ ಈಗ ಇತ್ತ ನೋಡಿರಿ. ಇಸ್ಮಾಯಿಲನು ನಿಮ್ಮ ಕುಮಾರಿಯನ್ನು ತನ್ನ ಜನಾನಖಾನೆಗೆ ಸೇರಿಸಿಕೊಂಡು ನಿಮ್ಮನ್ನು ದೊಡ್ಡ ಅಧಿಕಾರಿಯನ್ನಾಗಿ ಮಾಡುವನೆಂದು ನೀವು ತಿಳಿದಿದ್ದೀರಾಗಿದ್ದೀತು. ನನ್ನ ದೇಹವು ಶತಚ್ಛಿದ್ರವಾಗುವವರೆಗೂ ಈ ಕಾರ್ಯವನ್ನು ನಾನು ಎಂದಿಗೂ ಮಾಡಗೊಡಲಿಕ್ಕಿಲ್ಲ. ನೀವು ನಿಮ್ಮ ಪುತ್ರಿಯನ್ನು ನನ್ನಂಥ ನೀಚಕುಲೋತ್ಪನ್ನನಿಗೆ ಕೊಡದಿದ್ದರೆ ಇಷ್ಟೇ ಹೋಯಿತು; ಆದರೆ ಆ ಯವನ ಬಾದಶಹನಿಗೆ ಮಾತ್ರ ನಿಮ್ಮ ಕುಮಾರಿಯನ್ನು ಕೊಡದಂತೆ ಜಾಗ್ರತೆ ವಹಿಸಿರಿ. ಹಿಂದೂ ಸ್ತ್ರೀಯು ಯವನನ ಅರ್ಧಾಂಗಿಯಾಗುವದಕ್ಕೆ ಈ ಹಿಂದೂ ವೀರನು ಎಂದಿಗೂ ಆಸ್ಪದ ಕೊಡಲಿಕ್ಕಿಲ್ಲ. ಹಾಗೆಲ್ಲಿಯಾದರೂ ಮುಚ್ಚುಮರೆಯಿಂದ ನಿಮ್ಮ ಕುಮಾರಿಯನ್ನು ವರಿಸುವ ಹುಚ್ಚುತನವನ್ನು ಆತನು ಕೈಕೊಂಡರೆ, ಇದೋ, ಈ ಕತ್ತಿಯಿಂದ ಆತನ ಶಿರವನ್ನು ಚೆಂಡಾಡದೆ ಬಿಡೆನು. ನಿಮ್ಮಂಥ ಬಹುಕೃತವೇಷಧಾರಿಗಳಾದರೂ ತಮ್ಮ ನೀಚತನದ ಪ್ರಯತ್ನಕ್ಕೆ ತಕ್ಕ ಮುಕ್ತಿಫಲವನ್ನನುಭವಿಸುವಿರಿ.”

ಆತನ ಬಾಯಿಂದ ಇನ್ನು ಮುಂದೆ ಮಾತುಗಳು ಹೊರಡಲಿಲ್ಲ. ಅವನು ಇಷ್ಟು ಮಾತನ್ನು ಬಡಬಡ ಆಡಿದವನೆ ಒಂದು ಕ್ಷಣ ಸಹ ಅಲ್ಲಿ ನಿಲ್ಲದೆ, ತನ್ನ ಚಪಲಾಶ್ವವನ್ನೇರಿ ಹೊರಟು ನಡೆದನು. ಯೋಚನಾತರಂಗಗಳಿಂದ ಉದ್ವಿಗ್ನ

ಚಿತ್ತನಾದ ಆ ಸ್ವಾಭಿಮಾನಿಯು ಕುದುರೆಯ ಕಡಿವಾಣವನ್ನು ಸಡಿಲು ಮಾಡಿ ಬಿಟ್ಟುಬಿಟ್ಟಿದ್ದನು. ದಾರಿಯು ಕವಲೊಡೆಯುವ ಸ್ಥಳದಲ್ಲಿ ಒಮ್ಮೆಲೆ ಕುದುರೆಯು ನಿಂತಿತೆಂದರೆ, ಐದು-ಹತ್ತುಗಳಿಗೆಗಳವರೆಗೆ ಅದು ಹಾಗೆಯೇ ನಿಂತಿದ್ದರೂ ಅದರ ಎಚ್ಚರಿಕೆಯು ನಾರಾಯಣದೇವನಿಗೆ ಬೇಗನೇ ಹತ್ತುತ್ತಿದ್ದಿಲ್ಲ. ಅವನು ಹಿಂದೂ ಜನಾಂಗದ ಕೋಮುವಾರ ನರ್ತನದ ಬೀಭತ್ಸ ದೃಶ್ಯದ ಭವಿಷ್ಯವನ್ನು ಚಿಂತಿಸುತ್ತ ಸಾಗಿದ್ದನು.

— —

## ಇವನೇನು ಸಮ್ರಾಟನೋ ಪರಿವ್ರಾಟನೊ!

ಔರಂಗಜೇಬ ಬಾದಶಹನು ಪಟ್ಟವೇರಿದ್ದನು. ಅವನು ತನ್ನ ಸಹೋದರಿಯಾದ ರೋಷನ ಆರಳ ಸಹಾಯದಿಂದ ಪಟ್ಟಬಾಧ್ಯರನ್ನೆಲ್ಲ ಕೊಲ್ಲಿಸಿ, ತನ್ನ ದಾರಿಯನ್ನು ನಿರಾತಂಕವಾಗಿ ಮಾಡಿಕೊಂಡಿದ್ದನು. ಸರ್ವತ್ರ ಹಿಂದುಸ್ಥಾನದಲ್ಲಿಯೂ ಯವನ ಸತ್ತೆಯನ್ನು ನೆಲೆಗೊಳಿಸಿ ಹಿಂದೂಜನಪದವಾದ ಭಾರತವರ್ಷವನ್ನು ಮುಸಲ್ಮಾನಮಯವಾಗಿ ಮಾಡಬೇಕೆಂಬುದೇ ಆತನ ಹೆಬ್ಬಯಕೆಯಾಗಿದ್ದಿತು. ಹಿಂದೀಯರ ಸ್ವಾತಂತ್ರ್ಯಹರಣವನ್ನು ಮಾಡಿ ಅವರನ್ನು ರಸಾತಳಕ್ಕೆ ಮುಟ್ಟಿಸಲುವಾಗಿ ಅವನು ಟೊಂಕ ಬಿಗಿದಿದ್ದನು. ಒಂದು ಕ್ಷಣದಲ್ಲಿ ವೇದಘೋಷವು ಕೇಳಿದರೆ, ಮರುಕ್ಷಣದಲ್ಲಿಯೇ 'ಅಯ್ಯೋ!' ಎಂಬ ಕರುಣಾಘೋಷವು ಕೇಳಬರುತ್ತಿತ್ತು. ತುಂಬಿದ ಗರ್ಭವುಳ್ಳ ಹಸುವನ್ನು ತಂದು, ಹಿಂದೀಯರೆದುರಿನಲ್ಲಿ ಅದನ್ನು ಕಡಿಯುವಾಗ ಭಯದಿಂದ ಆ ಮೂಕ ಪ್ರಾಣಿಯು ಪ್ರಸವಿಸುವದನ್ನು ನೋಡಿ, ಅಟ್ಟಹಾಸ ಮಾಡುವದು ಯವನರ ದಿನಚರಿಯ ಕೆಲಸಗಳಾಗಿದ್ದವು. ಸ್ತ್ರೀರೋದನ, ಅನಾಥರ ಆಕ್ರೋಶ, ಹಿಂದೀಯರ ಹಾಹಾಕಾರ ಇವೇ ಬಾದಶಹನ ವಿಜಯಘೋಷಗಳಾಗಿದ್ದವು. ಅಸ್ವತಂತ್ರ ಜನಾಂಗವು ಬಗೆಬಗೆಯ ಕ್ಲೇಶವನ್ನನುಭವಿಸುವದರಲ್ಲಿ ಆಶ್ಚರ್ಯವೇನಿರುವುದು?

ಬಾದಶಹನು ಪಟ್ಟವೇರಿದ ಅತ್ಯಲ್ಪ ಕಾಲದಲ್ಲಿಯೇ ರಾಜ್ಯವನ್ನು ಒಳ್ಳೇ ದರ್ಪದಿಂದ ಆಳತೊಡಗಿದ್ದನು. ಅವನು ಶಹಾಜಹಾನನ ಕಾಲದಲ್ಲಿ ರಾಜಮನೆತನದವರು ಊಟಕ್ಕಾಗಿ ಉಪಯೋಗಿಸುತ್ತಿದ್ದ ಚಿನ್ನ-ಬೆಳ್ಳಿಯ ತಟ್ಟೆಗಳನ್ನು ಕರಗಿಸಿ, ಮಾರಿ ಆದರ ಹಣದ ಉಪಯೋಗವನ್ನು ಶಸ್ತ್ರಾಸ್ತ್ರಗಳ ಸಂಗ್ರಹಕ್ಕಾಗಿ ಮಾಡಿದನು. ತಾನು ದಿನವಹಿ ಧರಿಸುವ ಅಮೂಲ್ಯ ವಸ್ತುಗಳ ಬೆಲೆಯಿಂದ ಸವಾರ ಸೈನ್ಯದ ಹೆಚ್ಚಳ ಮಾಡಿದನು. ಅವನು ತನ್ನ ನಿತ್ಯದ ಮೃಷ್ಟಾನ್ನ ಭೋಜನವನ್ನು ನಿಲ್ಲಿಸಿ, ಸೈನಿಕರಿಗೆ ಕೊಡುತ್ತಿದ್ದ ಸಾಧಾರಣ ತರಗತಿಯ ಆಹಾರಕ್ಕೆ ಪ್ರತಿಯಾಗಿ ಶ್ರೇಷ್ಠ ತರಗತಿಯ ಆಹಾರವನ್ನು ಕೊಡುವಂತೆ ವ್ಯವಸ್ಥೆ ಮಾಡಿದನು. ಪ್ರಜೆಗಳ ಹಣವನ್ನು ದೇಶೋದ್ಧಾರಕ್ಕೂ ಮತಪ್ರಸಾರಕ್ಕೂ ವಿನಿಯೋಗಿಸಬೇಕಲ್ಲದೆ, ಸ್ವಾರ್ಥ

ಕ್ಕಾಗಿ ಒಂದು ಚಿಕ್ಕ ಕಾಸನ್ನಾದರೂ ಉಪಯೋಗಿಸಕೂಡದೆಂದು ಅವನು ನಿರ್ಧರಿಸಿದ್ದನು. ಬಾದಶಹನ ಈ ಕೆಲವು ಗುಣಗಳು ಒಳ್ಳೇ ಆದರ್ಶವಾಗಿದ್ದವು. ಆತನ ಕಾಲದಲ್ಲಿ ಆರ್ಯಾವರ್ತವು ಯವನಮಯವಾಗಿದ್ದಿದ್ದರೆ ಔರಂಗಜೇಬ ನಂತಹ ಹೆಸರಾದ ದೊರೆಯು ಮತ್ತೊಬ್ಬನಾಗುತ್ತಿದ್ದಿಲ್ಲ; ಆದರೆ ಬಾದಶಹನ ಹೆಸರು ಅಜರಾಮರವಾಗಿ ನಿಲ್ಲುವದಕ್ಕಾಗಿ ಹಿಂದುಗಳ ಅಸ್ತಿತ್ವವು ನಾಶವಾಗಬೇಕೆಂದು ಈಶ್ವರೀ ಸಂಕೇತವಿದ್ದಿಲ್ಲ.

ಬಾದಶಹನ ಅರಮನೆಯ ಮುಂಭಾಗದಲ್ಲಿ ಓಲಗದ ವಿಶಾಲವಾದ ಚಾವಡಿಯು ಕಟ್ಟಲ್ಪಟ್ಟಿತ್ತು. ಈ ದಿನ ಓಲಗವು ನೆರೆಯತಕ್ಕದ್ದಿದ್ದುದರಿಂದ ಸಭಾಂಗಣವು ಅತ್ಯಂತ ಚಿತ್ತಾಕರ್ಷಕವಾಗಿ ರಚಿಸಲ್ಪಟ್ಟಿತ್ತು. ಬಾದಶಹನು ಮೇಲಂತಸ್ತಿನ ಜಿಟ್ಕಾಲಿಕೆಯಲ್ಲಿ ಕುಳಿತು ಸಭಾಂಗಣದ ಸುಂದರ ದೃಶ್ಯವನ್ನು ಅಡಿಗಡಿಗೆ ನೋಡುತ್ತಿದ್ದನು.

ದರ್ಬಾರಕ್ಕೆ ಹೋಗುವ ವೇಳೆಯಾದುದರಿಂದ ಬಾದಶಹನ ಸರ್ವಾಂಗವೂ ದರ್ಬಾರೀ ಪೋಷಾಕಿನಿಂದ ಅಲಂಕೃತವಾಗಿತ್ತು. ಬಾದಶಹನು ಇನ್ನು ಹೊರಡತಕ್ಕವನು ಇಷ್ಟರಲ್ಲಿಯೆ:—

“ಪ್ರಿಯಕರಾ, ಈ ದಿನ ಓಲಗಕ್ಕೆ ಹೋಗುವದಿರುವುದೇನು?”

ಬಾದಶಹನು ಹಿಂತಿರುಗಿ ನೋಡಿದನು. ತನ್ನ ಪ್ರಿಯತಮೆಯಾದ ಉದೇಪುರಿ ಬೇಗಮಳು ಸುಹಾಸ್ಯವದನೆಯಾಗಿ ಅಂತಃಪುರದ ಕಡೆಯಿಂದ ಬರುತ್ತಿದ್ದಳು. ಉದೇಪುರಿಯನ್ನು ನೋಡಿ ಬಾದಶಹನಿಗೆ ಹಿಡಿಸಲಾರದಷ್ಟು ಆನಂದವಾಯಿತು. ಆಗ ಅವನು: “ಪ್ರಿಯೆ, ಉದೇಪುರಿ, ಈಗ ನಾನು ದರ್ಬಾರಕ್ಕೆ ಹೋಗಬೇಕಾಗಿದೆ. ಮುಸಲ್ಮಾನ ಧರ್ಮದ ವಿಷಯವಾಗಿ ಜನರ ಮನಸ್ಸಿನಲ್ಲಿ ಭಕ್ತಿಯನ್ನು ನೆಲೆಗೊಳಿಸುವ ಸಲುವಾಗಿ ಒಂದು ಆಘೋಷಣದ ಭಾಷಣ ಮಾಡಿ ಪರವರದಿಗಾರ ಖುದಾನ ಕಾರ್ಯವನ್ನು ಸಫಲ ಮಾಡಬೇಕೆಂದು ಬಗೆದಿರುವೆನು.”

ಬಾದಶಹನು ಇಷ್ಟು ನುಡಿಯುವ ವೇಳೆಗೆ ಹೊರಗಿನಿಂದ:—“ಹುಜೂರ, ದರ್ಬಾರವು ಸಿದ್ಧವಾಗಿದೆ. ಸಭಾಸದರು ತಮ್ಮ ನಿರೀಕ್ಷಣೆಯಲ್ಲಿರುವರು” ಎಂದು ಸೇನಾಪತಿಯಾದ ಸೂಲಫಿಕರಖಾನನು ಬಹು ವಿನಯದಿಂದ ಹೇಳಿದನು.

“ಖಬರದಾರ! ದರ್ಬಾರದ ವೇಳೆಯು ನನಗೆ ಗೊತ್ತಿರುವದಿಲ್ಲವೆಂದು ತಿಳಿದಿರುವೆಯೇನು?” ಬಾದಶಹನು ಕ್ರುದ್ಧ ಮುದ್ರೆಯಿಂದ ಹೀಗೆ ನುಡಿದವನೇ ಖಾನನ ಬಲಗಯ್ಯನ್ನು ಹಿಡಿದು ಜಿಟ್ಕಾಲಿಕೆಯ ಕೆಳಗಿನ ನಿಚ್ಚಣಿಕೆಯ ವರೆಗೆ ಎಳೆತಂದನು. ಖಾನನು ಬಾದಶಹನ ಎಳೆತವನ್ನು ಆದಷ್ಟು ಕಡಿಮೆ ಮಾಡಿಕೊಳ್ಳುವ ಸಲುವಾಗಿ ಬಾದಶಹನೊಡನೆ ಲಗುಬಗನೆ ನಡೆದನು.

“ಮೂರ್ಖಾ! ಬಾದಶಹನು ಎಲ್ಲಿರುವನೆಂದು ತಿಳಿದು ಇಲ್ಲಿಯವರೆಗೆ ಬಂದಿರುವೆ?” ಎಂದವನೇ ಅವನು ಖಾನನ ಕತ್ತು ಹಿಡಿದು ನೂಕಿಬಿಟ್ಟನು.

ಅತ್ತ ಖಾನನು ಹೋದ ಬಳಿಕ ಇತ್ತ ಬಾದಶಹನು ಹೆಚ್ಚು ವೇಳೆಯನ್ನು ಅರಮನೆಯಲ್ಲಿ ಕಳೆಯಲಿಲ್ಲ. ಅವನು ಉದೇಪುರಿಯಿಂದ ಬೀಳ್ಕೊಂಡು, ಲಗುಬಗೆಯಿಂದ ಸಭಾಂಗಣದ ಕಡೆಗೆ ನಡೆದನು.

ಔರಂಗಜೇಬನ ದರ್ಬಾರದ ಪೋಷಾಕವು ಹೆಚ್ಚು ಆಡಂಬರದ್ದಾಗಿದ್ದಿಲ್ಲ. ಅವನು ಒಳಗಡೆಯಲ್ಲಿ ಒಂದು ಸಣ್ಣ ತುಂಡ ಅಂಗಿಯನ್ನು ಧರಿಸಿ ಮೇಲುಗಡೆ ಒಂದು ನಿಲುವಂಗಿಯನ್ನು ತೊಟ್ಟಿದ್ದನು. ತಲೆಗೆ ಬಿಳಿಯ ಕೆಂಪುಮಿಶ್ರವಾದ ಜುಂಗು ಬಿಟ್ಟ ಶಿರೋವೇಷ್ಟನವನ್ನು ಸುತ್ತಿದ್ದನು. ಆ ಜುಂಗಿನ ತುದಿಯಲ್ಲಿ ಬಹು ಮೂಲ್ಯವುಳ್ಳ ಮುತ್ತುಗಳು ಜೋಡಿಸಲ್ಪಟ್ಟಿದ್ದವು. ಅವನು ಕೈಯಲ್ಲಿ ಬಹು ನಾಜೂಕಾದ, ಉದ್ದವಾದ ಕೋಲನ್ನು ಹಿಡಿದಿದ್ದನು. ಕಾಲಲ್ಲಿ ಮುಸಲ್ಮಾನ ಬಾದಶಹರುಗಳು ಆಗಿನ ಕಾಲದಲ್ಲಿ ಮೆಟ್ಟುತ್ತಿದ್ದ, ರೇಶಮೆಯಿಂದ ಕೂಡಿದ ಚಲಾಟಿಯನ್ನು ಮೆಟ್ಟಿದ್ದನು. ಅವನು ಮುಂದೆ ಒಂದು ಸಭಾಸ್ಥಾನವನ್ನು ಪ್ರವೇಶಿಸಿದ ಕೂಡಲೆ ಬಾದಶಹನನ್ನು ಹಿಂಬಾಲಿಸಿ ಬಂದಿದ್ದ ಸಿಪಾಯಿಗಳೆಲ್ಲರೂ ಹಿಂದಿನಿಂದಲೇ ಬಾದಶಹನಿಗೆ ನಮಸ್ಕರಿಸಿ ಬದಿಗೆ ಸರಿದರು. ಬಾದಶಹನೊಬ್ಬನೇ ಸರಸರನೆ ಮುಂದೆ ಬಂದನು. ಸಭಾಸದರೆಲ್ಲರೂ ಬಗ್ಗಿ ಬಹು ವಿನಯದಿಂದ ಮುಜುರೆ ಮಾಡಿದರು. ಬಾದಶಹನು ಅವರ ಕುರ್ನಿಸಗಳನ್ನು ಆದರಿಂದ ಸ್ವೀಕರಿಸುತ್ತಾ, ಎದುರಿಗಿದ್ದ ಸಿಂಹಾಸನವನ್ನೇರಿದನು.

ಅವನು ತನ್ನ ಕ್ರೂರ ಕಣ್ಣುಗಳಿಂದ ಸಭೆಯನ್ನು ದಿಟ್ಟಿಸಿ ನೋಡಿದನು. ನಿಮಂತ್ರಿತರಾದ ದೊಡ್ಡ-ದೊಡ್ಡ ಮಾನಕರಿಗಳೆಲ್ಲರೂ ಮುಂಭಾಗದ ಆಸನಗಳಲ್ಲಿ ಮಂಡಿಸಿದ್ದರು. ಬಾದಶಹನ ಬಲಭಾಗಕ್ಕೆ ಸ್ವಲ್ಪ ಓರೆಯಾಗಿ ಮುಖ್ಯ ವಜೀರನೂ ವಜೀರನಿಗಿಂತಲೂ ಸ್ವಲ್ಪ ಹಿಂಭಾಗದಲ್ಲಿ ಸೇನಾಪತಿಯೂ ಕುಳಿತಿದ್ದರು. ಎಡಭಾಗದ ಬಾದಶಹನ ಸಮೀಪದಲ್ಲಿ ಓಲಗದ ಕಾಜಿಯನು ಕುಳಿತಿದ್ದನು. ಅವನಿಗೆ ಆಸನಗೀಸನಗಳಿರಲಿಲ್ಲ. ಓಲಗದಲ್ಲಿ ಸ್ವಾಭಾವಿಕವಾಗಿಯೇ ಹಾಸಿದ್ದ ರತ್ನಗಂಬಳಿಯ ಮೇಲೆ ಆತನು ಕುಳಿತಿದ್ದನು. ಆತನ ಹಿಂದಿನಿಂದ ಖಾಜಿಗಳೂ ಮೌಲವಿಗಳೂ ತನತಮಗೆ ಯೋಗ್ಯವಾದ ಪೀಠಗಳಲ್ಲಿ ಮಂಡಿಸಿದ್ದರು. ಓಲಗದ ಜನರನ್ನೆಲ್ಲಾ ಒಳಸಿಕೊಂಡು ಸರದಾರ ವೃಂದವು ಕುಳಿತಿದ್ದಿತು. ಬಾದಶಹನು ಸಭೆಯನ್ನೆಲ್ಲವನ್ನೂ ನೋಡುವದಾದ ಬಳಿಕ ತನ್ನ ಸರಸವಾಣಿಯಿಂದ ಸಭಿಕರನ್ನು ಸಂಬೋಧಿಸಿ:—

"ಎಲೈ ರಾಜನಿಷ್ಠ ದಂಡಾಳುಗಳೇ, ಹಾಗು ಸರದಾರ-ಶ್ರೀಮಂತರುಗಳೇ, ಈ ದಿನದ ವರೆಗೂ ನೀವು ಮಹಮ್ಮದ ಪೈಗಂಬರರ ಆಜ್ಞೆಯನ್ನು ಯಥೋಚಿತವಾಗಿ ನೆರವೇರಿಸಿ ಕೀರ್ತಿಭಾಜನರಾಗಿರುವಿರಿ. ಅಲ್ಲಾನಲ್ಲಿಯ ನಮ್ಮ ಭಕ್ತಿಯೇ ನಮ್ಮ ಕರ್ತವ್ಯಜಾಗೃತಿಗೂ ಜಯಕ್ಕೂ ಇಂದಿನ ವರೆಗೂ ಕಾರಣವಾಗಿದೆ, ಎಂಬುದನ್ನು ಪೈಗಂಬರರ ಆಜ್ಞಾಧಾರಕರಾದ ನಿಮಗೆ ಮತ್ತೆ ಮತ್ತೆ ಹೇಳುವ ಕಾರಣವಿಲ್ಲ. ನಾವಾದರೂ ಈ ಸಿಂಹಾಸನವನ್ನು ಅಲ್ಲಾನ ಪ್ರೇರಣೆಯಿಂದಲೇ ಹತ್ತಿ ಆತನ

ಕ್ಕಾಗಿ ಒಂದು ಚಿಕ್ಕ ಕಾಸನ್ನಾದರೂ ಉಪಯೋಗಿಸಕೂಡದೆಂದು ಅವನು ನಿರ್ಧರಿಸಿದ್ದನು. ಬಾದಶಹನ ಈ ಕೆಲವು ಗುಣಗಳು ಒಳ್ಳೇ ಆದರ್ಶವಾಗಿದ್ದವು. ಆತನ ಕಾಲದಲ್ಲಿ ಆರ್ಯಾವರ್ತವು ಯವನಮಯವಾಗಿದ್ದಿದ್ದರೆ ಔರಂಗಜೇಬ ನಂತಹ ಹೆಸರಾದ ದೊರೆಯು ಮತ್ತೊಬ್ಬನಾಗುತ್ತಿದ್ದಿಲ್ಲ; ಆದರೆ ಬಾದಶಹನ ಹೆಸರು ಅಜರಾಮರವಾಗಿ ನಿಲ್ಲುವದಕ್ಕಾಗಿ ಹಿಂದುಗಳ ಅಸ್ತಿತ್ವವು ನಾಶವಾಗಬೇಕೆಂದು ಈಶ್ವರೀ ಸಂಕೇತವಿದ್ದಿಲ್ಲ.

ಬಾದಶಹನ ಅರಮನೆಯ ಮುಂಭಾಗದಲ್ಲಿ ಓಲಗದ ವಿಶಾಲವಾದ ಚಾವಡಿಯು ಕಟ್ಟಲ್ಪಟ್ಟಿತ್ತು. ಈ ದಿನ ಓಲಗವು ನೆರೆಯತಕ್ಕದ್ದಿದ್ದುದರಿಂದ ಸಭಾಂಗಣವು ಅತ್ಯಂತ ಚಿತ್ತಾಕರ್ಷಕವಾಗಿ ರಚಿಸಲ್ಪಟ್ಟಿತ್ತು. ಬಾದಶಹನು ಮೇಲಂತಸ್ತಿನ ಅಟ್ಟಾಲಿಕೆಯಲ್ಲಿ ಕುಳಿತು ಸಭಾಂಗಣದ ಸುಂದರ ದೃಶ್ಯವನ್ನು ಆಡಿಗಡಿಗೆ ನೋಡುತ್ತಿದ್ದನು.

ದರ್ಬಾರಕ್ಕೆ ಹೋಗುವ ವೇಳೆಯಾದುದರಿಂದ ಬಾದಶಹನ ಸರ್ವಾಂಗವೂ ದರ್ಬಾರೀ ಪೋಷಾಕಿನಿಂದ ಅಲಂಕೃತವಾಗಿತ್ತು. ಬಾದಶಹನು ಇನ್ನು ಹೊರಡತಕ್ಕವನು ಅಷ್ಟರಲ್ಲಿಯೆ:—

"ಪ್ರಿಯಕರಾ, ಈ ದಿನ ಓಲಗಕ್ಕೆ ಹೋಗುವದಿರುವುದೇನು?"

ಶಾಹೇನಶಹಾನು ಹಿಂದಿರುಗಿ ನೋಡಿದನು. ತನ್ನ ಪ್ರಿಯತಮೆಯಾದ ಉದೇಪುರಿ ಬೇಗಮೆಯು ಸುಹಾಸ್ಯವದನೆಯಾಗಿ ಅಂತಃಪುರದ ಕಡೆಯಿಂದ ಬರುತ್ತಿದ್ದಳು. ಉದೇಪುರಿಯನ್ನು ನೋಡಿ ಬಾದಶಹನಿಗೆ ಹಿಡಿಸಲಾರದಷ್ಟು ಆನಂದವಾಯಿತು. ಆಗ ಅವನು: "ಹೌದು. ಉದೇಪುರಿ, ಈಗ ನಾನು ದರ್ಬಾರಕ್ಕೆ ಹೋಗಬೇಕಾಗಿದೆ. ಮುಸಲ್ಮಾನ ಧರ್ಮದ ವಿಷಯವಾಗಿಯೂ ಅಲ್ಲಾನಲ್ಲಿ ಭಕ್ತಿಯನ್ನು ನೆಲೆಗೊಳಿಸುವ ಸಲುವಾಗಿಯೂ ಒಂದು ಅಮೋಘವಾದ ಭಾಷಣ ಮಾಡಿ ಪರವರದಿಗಾರ ಖುದಾನ ಕಾರ್ಯವನ್ನು ಸಫಲ ಮಾಡಬೇಕೆಂದು ಬಗೆದಿರುವೆನು."

ಬಾದಶಹನು ಇಷ್ಟು ನುಡಿಯುವ ವೇಳೆಗೆ ಹೊರಗಿನಿಂದ:—"ಹುಜೂರ, ದರ್ಬಾರವು ಸಿದ್ಧವಾಗಿದೆ. ಸಭಾಸದರು ತಮ್ಮ ನಿರೀಕ್ಷಣೆಯಲ್ಲಿರುವರು" ಎಂದು ಸೇನಾಪತಿಯಾದ ಸೂಲಪಿಕರಖಾನನು ಬಹು ವಿನಯದಿಂದ ಹೇಳಿದನು.

"ಖಬರದಾರ! ದರ್ಬಾರದ ವೇಳೆಯು ನನಗೆ ಗೊತ್ತಿರುವದಿಲ್ಲವೆಂದು ತಿಳಿದಿರುವೆಯೇನು?" ಬಾದಶಹನು ಕ್ರುದ್ಧ ಬುದ್ಧಿಯಿಂದ ಹೀಗೆ ನುಡಿದವನೇ ಖಾನನ ಬಲಗವಿಯನ್ನು ಹಿಡಿದು ಅಟ್ಟಾಲಿಕೆಯ ಕೆಳಗಿನ ನಿಚ್ಚಣಿಕೆಯ ವರೆಗೆ ಎಳೆತಂದನು. ಖಾನನು ಬಾದಶಹನ ಎಳೆತವನ್ನು ಆದಷ್ಟು ಕಡಿಮೆ ಮಾಡಿಕೊಳ್ಳುವ ಸಲುವಾಗಿ ಬಾದಶಹನೊಡನೆ ಲಗುಬಗನೆ ನಡೆದನು.

"ಮೂರ್ಖಾ! ಬಾದಶಹನು ಎಲ್ಲಿರುವನೆಂದು ತಿಳಿದು ಇಲ್ಲಿಯವರೆಗೆ ಬಂದಿರುವೆ?" ಎಂದವನೇ ಅವನು ಖಾನನ ಕತ್ತು ಹಿಡಿದು ನೂಕಿಬಿಟ್ಟನು.

ಅತ್ತ ಖಾನನು ಹೋದ ಬಳಿಕ ಇತ್ತ ಬಾದಶಹನು ಹೆಚ್ಚು ವೇಳೆಯನ್ನು ಅರಮನೆಯಲ್ಲಿ ಕಳೆಯಲಿಲ್ಲ. ಅವನು ಉದೇಪುರಿಯಿಂದ ಬೀಳ್ಕೊಂಡು, ಲಗುಬಗೆಯಿಂದ ಸಭಾಂಗಣದ ಕಡೆಗೆ ನಡೆದನು.

ಔರಂಗಜೇಬನ ದರ್ಬಾರದ ಪೋಷಾಕವು ಹೆಚ್ಚು ಆಡಂಬರದ್ದಾಗಿದ್ದಿಲ್ಲ. ಅವನು ಒಳಗಡೆಯಲ್ಲಿ ಒಂದು ಸಣ್ಣ ತುಂಡ ಅಂಗಿಯನ್ನು ಧರಿಸಿ ಮೇಲುಗಡೆ ಒಂದು ನಿಲುವಂಗಿಯನ್ನು ತೊಟ್ಟಿದ್ದನು. ತಲೆಗೆ ಬಿಳಿಯ ಕೆಂಪುಮಿಶ್ರವಾದ, ಜುಂಗು ಬಿಟ್ಟ ಶಿರೋವೇಷ್ಟನವನ್ನು ಸುತ್ತಿದ್ದನು. ಆ ಜುಂಗಿನ ತುದಿಯಲ್ಲಿ ಬಹು ಮೂಲ್ಯವುಳ್ಳ ಮುತ್ತುಗಳು ಜೋಡಿಸಲ್ಪಟ್ಟಿದ್ದವು. ಅವನು ಕೈಯಲ್ಲಿ ಬಹು ನಾಜೂಕಾದ, ಉದ್ದವಾದ ಕೋಲನ್ನು ಹಿಡಿದಿದ್ದನು. ಕಾಲಲ್ಲಿ ಮುಸಲ್ಮಾನ ಬಾದಶಹರುಗಳು ಆಗಿನ ಕಾಲದಲ್ಲಿ ಮೆಟ್ಟುತ್ತಿದ್ದ, ರೇಶಮೆಯಿಂದ ಕೂಡಿದ ಚಲಾಟಿಯನ್ನು ಮೆಟ್ಟಿದ್ದನು. ಅವನು ಮುಂದೆ ಬಂದು ಸಭಾಸ್ಥಾನವನ್ನು ಪ್ರವೇಶಿಸಿದ ಕೂಡಲೆ ಬಾದಶಹನನ್ನು ಹಿಂಬಾಲಿಸಿ ಬಂದಿದ್ದ ಸಿಪಾಯಿಗಳೆಲ್ಲರೂ ಹಿಂದಿನಿಂದಲೇ ಬಾದಶಹನಿಗೆ ನಮಸ್ಕರಿಸಿ ಬದಿಗೆ ಸರಿದರು. ಬಾದಶಹನೊಬ್ಬನೇ ಸರಸರನೆ ಮುಂದೆ ಬಂದನು. ಸಭಾಸದರೆಲ್ಲರೂ ಬಗ್ಗಿ ಬಹು ವಿನಯದಿಂದ ಮುಜುರೆ ಮಾಡಿದರು. ಬಾದಶಹನು ಅವರ ಕುರ್ನಿಸಗಳನ್ನು ಆದರದಿಂದ ಸ್ವೀಕರಿಸುತ್ತಾ, ಎದುರಿಗಿದ್ದ ಸಿಂಹಾಸನವನ್ನೇರಿದನು.

ಅವನು ತನ್ನ ಕ್ರೂರ ಕಣ್ಣುಗಳಿಂದ ಸಭೆಯನ್ನು ದಿಟ್ಟಿಸಿ ನೋಡಿದನು. ನಿಮಂತ್ರಿತರಾದ ದೊಡ್ಡ-ದೊಡ್ಡ ಮಾನಕರಿಗಳೆಲ್ಲರೂ ಮುಂಭಾಗದ ಆಸನಗಳಲ್ಲಿ ಮಂಡಿಸಿದ್ದರು. ಬಾದಶಹನ ಬಲಭಾಗಕ್ಕೆ ಸ್ವಲ್ಪ ಓರೆಯಾಗಿ ಮುಖ್ಯ ವಜೀರನೂ ವಜೀರನಿಗಿಂತಲೂ ಸ್ವಲ್ಪ ಹಿಂಭಾಗದಲ್ಲಿ ಸೇನಾಪತಿಯೂ ಕುಳಿತಿದ್ದರು. ಎಡಭಾಗದ ಬಾದಶಹನ ಸಮೀಪದಲ್ಲಿ ಓಲಗದ ಕಾಜೀನನು ಕುಳಿತಿದ್ದನು. ಅವನಿಗೆ ಆಸನಗೀಸನಗಳಿರಲಿಲ್ಲ. ಓಲಗದಲ್ಲಿ ಸ್ವಾಭಾವಿಕವಾಗಿಯೇ ಹಾಸಿದ್ದ ರತ್ನಗಂಬಳಿಯ ಮೇಲೆ ಆತನು ಕುಳಿತಿದ್ದನು. ಆತನ ಹಿಂದಿನಿಂದ ಖಾಜಿಗಳೂ ಮೌಲವಿಗಳೂ ತಮತಮಗೆ ಯೋಗ್ಯವಾದ ಪೀಠಗಳಲ್ಲಿ ಮಂಡಿಸಿದ್ದರು. ಓಲಗದ ಜನರನ್ನೆಲ್ಲಾ ಒಳಸಿಕೊಂಡು ಸರದಾರ ವೃಂದವು ಕುಳಿತಿದ್ದಿತು. ಬಾದಶಹನು ಸಭೆಯನ್ನೆಲ್ಲವನ್ನೂ ನೋಡುವದಾದಬಳಿಕ ತನ್ನ ಸರಸವಾಣಿಯಿಂದ ಸಭಿಕರನ್ನು ಸಂಬೋಧಿಸಿ:—

"ಎಲೈ ರಾಜನಿಷ್ಠ ದಂಡಾಳುಗಳೇ, ಹಾಗು ಸರದಾರ-ಶ್ರೀಮಂತರುಗಳೇ, ಈ ದಿನದ ವರೆಗೂ ನೀವು ಮಹಮ್ಮದ ಪೈಗಂಬರರ ಆಜ್ಞೆಯನ್ನು ಯಥೋಚಿತವಾಗಿ ನೆರವೇರಿಸಿ ಕೀರ್ತಿಭಾಜನರಾಗಿರುವಿರಿ. ಅಲ್ಲಾನಲ್ಲಿಯ ನಮ್ಮ ಭಕ್ತಿಯೇ ನಮ್ಮ ಕರ್ತವ್ಯಜಾಗೃತಿಗೂ ಜಯಕ್ಕೂ ಇಂದಿನ ವರೆಗೂ ಕಾರಣವಾಗಿದೆ, ಎಂಬುದನ್ನು ಪೈಗಂಬರರ ಆಜ್ಞಾಧಾರಕರಾದ ನಿಮಗೆ ಮತ್ತೆ ಮತ್ತೆ ಹೇಳುವ ಕಾರಣವಿಲ್ಲ. ನಾವಾದರೂ ಈ ಸಿಂಹಾಸನವನ್ನು ಅಲ್ಲಾನ ಪ್ರೇರಣೆಯಿಂದಲೇ ಹತ್ತಿ ಆತನ

ಕಾರ್ಯವನ್ನು ಸಫಲಮಾಡುವ ಸಲುವಾಗಿಯೇ ಬಂಧು-ಮಿತ್ರರನ್ನೆಲ್ಲ ಅಗಲಿದೆವು. ಮಹಮ್ಮದೀಯ ಮತಕ್ಕೆ ಕುಠಾರಸ್ವರೂಪರಾದವರು ಅಣ್ಣನಾಗಲಿ-ತಮ್ಮನಾಗಲಿ, ತಂದೆಯಾಗಲಿ-ಮಿತ್ರನಾಗಲಿ, ಕೊನೆಗೆ ತನ್ನಲ್ಲಿಯೇ ಆಗಲಿ ಇಸ್ಲಾಮುಮತಕ್ಕೆ ವಿರುದ್ಧ ಭಾವಗಳುದಯಿಸಿದರೆ ಅಂಥವರನ್ನು ನಾಶಮಾಡುವದು ಪೈಗಂಬರರ ಶ್ರೇಷ್ಠಭಕ್ತರಾದ ನಮಗೆ ಎಂದಿಗೂ ಅಯೋಗ್ಯವಾಗಲಿಕ್ಕಿಲ್ಲ. ತನ್ನಲ್ಲಿಯು ಇಸ್ಲಾಮುಮತಕ್ಕೆ ವಿರೋಧವಾದ-ವಿಷಮಭಾವಗಳುದಯಿಸಿದಲ್ಲಿ, ತನ್ನ ನಾಶವನ್ನು ತಾನೇ ಸ್ವತಃ ಮಾಡಿಕೊಳ್ಳುವವನೇ ಪೈಗಂಬರರ ನಿಜವಾದ ಆಜ್ಞಾಧಾರಕನಾಗುವನು; ಏಕೆಂದರೆ, ಮುಂದೆ ಅಂಥವನಿಂದ ಮುಸಲ್ಮಾನ ಧರ್ಮಕ್ಕೆ ಧಕ್ಕೆಬಡಿಯುವ ಸಂಭವವಿರುತ್ತವೆ. ದಾರಾಷುಕೋವು ಸ್ವಮತಾಭಿಮಾನವನ್ನು ತೊರೆದು ಹಿಂದೀಯರ ಪಕ್ಷಪಾತಿಯಾಗಿದ್ದುದರಿಂದ ಅವನಿಗೆ ಅಲ್ಲಾನು ಯೋಗ್ಯದಂಡನೆಯನ್ನು ವಿಧಿಸಿದನು. ಅವನು ಮಾತೃಭಾಷೆಗೆ ಕೊಟ್ಟ ಪ್ರೋತ್ಸಾಹಕ್ಕಿಂತಲೂ ಕಾಫರ ಭಾಷೆಯಾದ ಗೀರ್ವಾಣ ಭಾಷೆಗೆ ಕೊಟ್ಟ ಪ್ರೋತ್ಸಾಹವು ಮೇಲ್ಮಟ್ಟದಗತಿಯಾಗಿತ್ತೆಂಬುದನ್ನು ನೀವೆಲ್ಲರೂ ಅರಿತೇ ಇರುವಿರಿ ಅಂಥ ಸ್ವಮತಕ್ಕೂ ಸ್ವಭಾಷೆಗೂ ಕಂಟಕಸ್ವರೂಪರಾದವರು ನಿಗ್ರಹಿಸಲ್ಪಟ್ಟರೆ ಯಾರಿಗೆ ದುಃಖವೆನಿಸುವದು? ಇಷ್ಟು ಷೂಜನ ವಿಷಯವು. ಆತನ ವಿಷಯಲೋಲುಪತೆಯು ಗುರುತು ಅನೇಕರ ಅನುಭವಕ್ಕೆ ಬಂದ ಮಾತಾಗಿರುವದು. ಆ ವಿಷಯಾಸಕ್ತನು ಮುಂದೆ ಬಂದು ರಾಜದಂಡವನ್ನು ಧರಿಸಿದ್ದರೆ ಈ ಸಿಂಹಾಸನವೂ ಬೊಕ್ಕಸವೂ ಇಷ್ಟು ಹೊತ್ತಿಗೆ ಕಾಫರಮಯವಾಗಿ ಹೋಗುತ್ತಿತ್ತೆಂಬ ಮಾತು ಕರತಲಾಮಲಕವಾಗಿರುವದು. ವಂಗದೇಶದಲ್ಲಿ ಆ ಕಾಫರರ ಸ್ವಾತಂತ್ರ್ಯವು ಹೆಚ್ಚುವದಕ್ಕೆ ಷೂಜನ ಪ್ರಬಲವಿಷಯಾಸಕ್ತಿಯೇ ಕಾರಣವಾಗಿತ್ತೆಂಬುದನ್ನು ನೀವೆಲ್ಲರೂ ಬಲ್ಲಿರಿ. ಆ ಮುರಾದನಾದರೂ ಅದೇ ರೀತಿಯು ವಿಷಯಾಸಕ್ತನಾಗಿದ್ದುದರಿಂದ ಅವನಿಗಾದರೂ ಯೋಗ್ಯ ಶಾಸನವೇ ಆಯಿತು. ಕುಡುಕನೂ ವಿಷಯಾಸಕ್ತನೂ ಆದ ಆತನು ಇಸ್ಲಾಮುಮತದ ಭವಿಷ್ಯದ ಸುಖಕ್ಕಾಗಿಯೇ ಅಲ್ಲಾನಿಂದ ನಿಗ್ರಹಿಸಲ್ಪಟ್ಟನೆಂದು ನಾವು ತಿಳಿಯುವೆವು. ಅಂಥ ಅವಿವೇಕಿ ರಾಜ್ಯಕರ್ತರು ಮುಂದೆ ಬಾಳಿದಲ್ಲಿ ಮುಸಲ್ಮಾನ ಧರ್ಮಕ್ಕೆ ಕುಂದನ್ನಾಶವನ್ನು ತರುವರೆಂಬ ಭವಿಷ್ಯವನ್ನು ಮನಗಂಡ ನಾವು ಅಲ್ಲಾನ ಕೃಪೆಯಿಂದ ರಾಜಸೂತ್ರವನ್ನು ವಹಿಸಿದೆವು. ನಮ್ಮ ಕಾರ್ಯಕ್ಕೆ ಪೈಗಂಬರರು ಗುಪ್ತವಾಗಿದ್ದು ನಮಗೆ ಸಹಾಯ ಮಾಡುತ್ತಿರುವದರಿಂದಲೇ ನಮ್ಮ ಕಾರ್ಯವು ಯಶಸ್ವಿಯಾಗಿ ಸಾಗುತ್ತಿದೆ. ಇನ್ನೂ ಮುಸಲ್ಮಾನ ಧರ್ಮವು ಸಾಕಾದಷ್ಟು ಬೆಳವಣಿಗೆಯನ್ನು ಹೊಂದಿರುವದಿಲ್ಲ. ಮುಸಲ್ಮಾನ ಧರ್ಮದ ಸೇವೆಯನ್ನು ನಾವೆಲ್ಲರೂ ಉತ್ಕ್ಯೋಪತಿಶಯವಾಗಿ ಮಾಡಬೇಕೆಂಬುದೇ ನಮ್ಮ ಪ್ರಬಲವಾದ ಗುರಿಯಾಗಿರುವದು. ಹಿಂದುಗಳು ಅತ್ಯಂತ ಶ್ರದ್ಧೆಯನ್ನಿಟ್ಟಿರುವ ಕಾಶಿಯಲ್ಲಿಯೂ ಮಥುರೆಯಲ್ಲಿಯೂ ನಮ್ಮ ಖಾಜಿಗಳು ಮತಪ್ರಸಾರ ಮಾಡಿದರೆ ಇಸ್ಲಾಮುಮತವು ಒಳಿತಾಗಿ ಮುಂದೆ ಬರುವದು. ಅವರಿಗೆ

ಬೇಕಾಗುವ ಹಣವನ್ನು ಬೊಕ್ಕಸದಿಂದ ಕೊಡಲ್ಪಡುವದು; ಸೈನ್ಯವು ಬೇಕಾದರೂ ಕಳುಹಿಸುವ ವ್ಯವಸ್ಥೆಯಾಗುವದು.''

ಬಾದಶಹನು ಈ ರೀತಿಯ ಭಾಷಣ ಮಾಡಿ ತನ್ನ ಗಂಭೀರ ಮುಖವನ್ನು ಮೌಲವಿಗಳೂ ಕಾಜಿಗಳೂ ಕುಳಿತ ನಿಟ್ಟಿಗೆ ತಿರುಗಿದನು. ಆವನು ಆ ನಿಟ್ಟಿನ ಕಡೆಗೆ ಒಂದೇಸವನೆ ನೋಡಹತ್ತಿದನು. ಅತನ ಆ ನೋಟವು "ನಿಮ್ಮಲ್ಲಿ ನನ್ನ ಈ ಮಾತನ್ನು ನೆರವೇರಿಸುವ ಸಾಮರ್ಥ್ಯವು ಯಾರಲ್ಲಿಯೂ ಇಲ್ಲವೆ?" ಎಂಬರ್ಥವನ್ನು ಕೊಡುವಂತಿತ್ತು. ಬಾದಶಹನು ಇನ್ನು ಆ ಖಾಜಿಗಳಲ್ಲಿ ಯಾರೊಬ್ಬರನ್ನಾದರೂ ಕುರಿತು ಕೇಳತಕ್ಕವನು. ಅಷ್ಟರಲ್ಲಿಯೇ ಒಬ್ಬ ಖಾಜಿಯು ಕೈಗಡದ ಧೈರ್ಯವನ್ನು ತಂದುಕೊಂಡು, ಎದ್ದು ಬಾದಶಹನಿಗೆ ಬಹು ವಿನಯದಿಂದ ಕುರ್ನಿಸಾತ ಮಾಡಿ:''ಖಾವಿಂದ, ಕ್ಷಮಿಸಿರಿ! ಮಥುರೆಯಲ್ಲಿನ ಕೇಶವರಾಯನ ದೇವಾಲಯದಲ್ಲಿ ಬೇಕಾದಷ್ಟು ನಗ-ನಾಣ್ಯಗಳಿರುವವು. ಅಲ್ಲಿಯ ದೇವಾಲಯವನ್ನು ಉಧ್ವಸ್ಥಗೊಳಿಸಿ, ಆ ಬಹು ಬೆಲೆಯ ವಸ್ತುಗಳನ್ನು ತಂದರೆ, ಮತಪ್ರಸಾರದ ಖರ್ಚಿಗೆ ಬೊಕ್ಕಸದ ಹಣದ ಆವಶ್ಯಕತೆ ಬೀಳಲಿಕ್ಕಿಲ್ಲ. ಮಥುರಾಪುರಿಯು ಮತಪ್ರಸಾರ ಮಾಡುವದಕ್ಕೂ ಯೋಗ್ಯ ಕ್ಷೇತ್ರವಾಗಿದೆ. ಕುರಾಣವನ್ನೂ ನಮ್ಮನ್ನೂ ರಕ್ಷಿಸುವದಕ್ಕಾಗಿ ಸೈನ್ಯಪಡೆಯನ್ನು ಕಳುಹಿಸಿದರೆ ನಮ್ಮ ಕಾರ್ಯವನ್ನು ನಾವು ಸುರಕ್ಷಿತವಾಗಿ ಮಾಡಬಹುದು. ಈ ಕರೀಫಹಜಾಜಿ ಖಾಜಿಗಳೂ ನನ್ನೊಡನೆ ಬರುವರು.

ಆ ಖಾಜಿಯು ಇಷ್ಟು ನುಡಿದು ಬಾದಶಹನಿಗೆ ಮತ್ತೊಮ್ಮೆ ನಮಸ್ಕರಿಸಿ ಕುಳಿತುಕೊಂಡನು. ಬಾದಶಹನು ಖಾಜಿಯ ಮಾತಿಗೆ ಒಪ್ಪಿಗೆಯನ್ನಿತ್ತು: "ಖಾಜಿಗಳೆ, ಒಳ್ಳೇ ಸಲಹೆಯನ್ನೇ ಇತ್ತಿರಿ. ನಿಮಗೆ ಶತ್ರುಗಳಿಂದ ಅಪಾಯ ತಟ್ಟದಂತೆ ಸೂಲಿಕರಖಾನ ಸೇನಾಪತಿಯನ್ನು ಸಸೈನ್ಯವಾಗಿ ಕಳುಹಿಸುವೆನು. ನಿಮಗೆ ಅವಶ್ಯಕತೆ ಬಿದ್ದಾಗ ಈ ಸೈನ್ಯದ ಉಪಯೋಗವನ್ನು ಪಡೆಯಿರಿ." ಬಾದಶಹನು ಇಷ್ಟು ನುಡಿಯುವ ವೇಳೆಗೆ ಸೂರ್ಯಾಸ್ತದ ವೇಳೆಯಾದುದರಿಂದ ಓಲಗವನ್ನು ಲಗುಬಗನೆ ಮುಗಿಸಿದನು. ಬಾದಶಹನು ಸಿಂಹಾಸನದಿಂದಿಳಿದೊಡನೆಯೇ ಸಭಿಕರೆಲ್ಲರೂ ಎದ್ದು: ''ಜೈ ಆಲಂಗೀರ ಬಾದಶಹಕೀ, ಜೈ ಮುಸಲ್ಮಾನ ಧರ್ಮಕೀ'' ಎಂದು ಮುಕ್ತಕಂಠದಿಂದ ಕೂಗಿದರು. ಬಳಿಕ ದರ್ಬಾರದ ಪರಿಸಮಾಪ್ತಿಯಾಯಿತು.

ಮಹಾಶಯ, ಬಾದಶಹನು ರಾಜ್ಯಶಕಟವನ್ನು ನೂಕುವುದರ ಜೊತೆಯಲ್ಲಿ ಮತಪ್ರಚಾರ ಮಾಡುವದನ್ನು ನೋಡಿದರೆ ಇವನೇನು ಸಾಮ್ರಾಟನೋ, ಪರಿವ್ರಾಟನೋ, ಎನ್ನುವ ಉದ್ಗಾರವು ಯಾರ ಬಾಯಿಂದಲಾದರೂ ಹೊರಡುತ್ತಿತ್ತೆಂಬದು ಸುಳ್ಳಲ್ಲ.

---

## ಮೇಲ್ತರಗತಿಯ ಮಾನವನ ವಿಚಾರವು ಹೀಗೆಯೇ ಸರಿ.

ನಾರಾಯಣ ದೇವನು ಒಂಟಿಗನಾಗಿ ತನ್ನ ಗೃಹದಲ್ಲಿ ಕುಳಿತಿದ್ದನು. ವೀರಪಾಲನಿಂದ ತನಗುಂಟಾದ ಅಪಮಾನಕ್ಕಾಗಿ ಅವನ ಮನಸ್ಸು ಅತ್ಯಂತ ಉದ್ವಿಗ್ನವಾಗಿತ್ತು. ಇದುವರೆಗೂ ಯದುಕುಮಾರಿಯನ್ನು ವಿವಾಹವಾಗಬೇಕೆಂದಿದ್ದ ತನ್ನ ಅಭೀಷ್ಟವು ಸಕಾಲದಲ್ಲಿ ಭಗ್ನವಾದುದಕ್ಕಾಗಿ ಆತನಿಗೆ ಅತ್ಯಂತ ವಿಷಾದವಾಯಿತು. ತನ್ನ ಪೂರ್ಣ ನಂಬಿಗೆಗೆ, ಪ್ರೇಮಕ್ಕೆ ಪಾತ್ರಳಾದ ಆ ಲಲನಾಮಣಿಯನ್ನು ಮರೆಯುವದು ಆತನಿಗೆ ದುಸ್ಸಹವಾಯಿತು. ತನ್ನ ಸಂಪೂರ್ಣ ಪ್ರಭುತ್ವವನ್ನು ದಿಲ್ಲೀಶ್ವರನಿಗೆ ಒಪ್ಪಿಸಿಬಿಡಬೇಕೆಂದು ಅವನು ಆಲೋಚಿಸಿದನು. ಸಮಾಜ ಮುಖಂಡರೂ ಧರ್ಮವೇದಿಗಳೂ ಅಲ್ಲಿನ ಸುಪ್ರಸಿದ್ಧ ಶ್ರೀಮಂತನಾದ ವೀರಪಾಲನನ್ನೇ ಅನುವರ್ತಿಸಿರಲು, ಸನಾತನ ಧರ್ಮದಲ್ಲಿ ತನಗೆ ಸ್ಥಾನ-ಮಾನಗಳು ಸಿಕ್ಕುವದು ಅಸಂಭವನೀಯವೆಂದು ಅವನು ತಿಳಿದನು. ಇತ್ತೀಚಿಗಿನ ಕೆಲವು ಸ್ಥಿತಿ-ಗತಿಗಳನ್ನು ನೋಡಿಯಂತೂ ಆ ಸ್ವಾಭಿಮಾನಿಯ ಹೃದಯವು ಥರಥರನೆ ನಡುಗಿತು. ತನ್ನ ಪ್ರೀತಿಯ ಸೇವಕನಾದ ದುರ್ಗಾಚರಣನೊಬ್ಬನನ್ನುಳಿದು ಬೇರೆ ಯಾರ ಮೇಲೆಯೂ ಆತನ ನಂಬಿಗೆಯು ನಿಲ್ಲುವಂತೆ ಇದ್ದಿಲ್ಲ.

ನಾರಾಯಣದೇವನು ವಿಚಾರತಂದ್ರಿಯಲ್ಲಿ ಲೀನನಾಗಿ ಎಷ್ಟೋ ವೇಳೆಯವರೆಗೆ ಒಬ್ಬನೇ ಮೌನವಾಗಿ ಕುಳಿತಿದ್ದನು. ಬಹಳ ವೇಳೆಯವರೆಗೆ ಅವನಿಂದ ಹೀಗೆ ಸುಮ್ಮನೆ ಕುಳಿತುಕೊಳ್ಳುವದಾಗಲಿಲ್ಲ. ಅವನು ಆಸನದಿಂದ ಎದ್ದುನಿಂತು ತನ್ನ ಅಂತರ್ಗೃಹದಿಂದ ಹೊರಬಿದ್ದನು. ಅವನು ಅಲ್ಲಲ್ಲಿ ಸುತ್ತಾಡುತ್ತ ತಾನು ಹಿಂದೆ ಯದುಕುಮಾರಿಯನ್ನು ಕರೆದೊಯ್ದ ಗುಹೆಯ ಅಂತರಾಳವನ್ನು ಪ್ರವೇಶಿಸಿದನು.

ಅವನು ಹಿಂದೊಮ್ಮೆ ಅದೇ ಗುಹೆಯನ್ನು ಪ್ರವೇಶಿಸಿದಾಗ ತನ್ನ ಪೂರ್ವಿಕರ ಅಭಿನಂದನೀಯವಾದ ಕಲಾಸೌಂದರ್ಯವನ್ನು ನೋಡುತ್ತಾ ಸಾಗಿದ್ದನು; ಆದರೆ ಇಂದು ಅವನು ಆ ಕಲೆಯು ನಾಮಶೇಷವಾಗಬೇಕೆಂಬ ಔತ್ಸುಕ್ಯದಿಂದ ಸಾಗಿದ್ದನು. ವೀರಪಾಲನೊಡನೆ ಸಂಬಂಧವನ್ನು ಬೆಳಿಸಿ ಅವನ ಉತ್ಕರ್ಷವನ್ನು ಸಾಧಿಸಬೇಕೆಂದಿದ್ದ ನಾರಾಯಣದೇವನ ಮನಸ್ಸು ಇಂದು ವಿರೂಪಿತವಾಗಿತ್ತು. ವೀರಪಾಲನ ರುಂಡವನ್ನು ದಿಂಡದಿಂದ ಬೇರೆಮಾಡುವದಕ್ಕಾಗಿ ಉತ್ಕಂಠಿತನಾಗಿ ಮುಂದುವರಿದಿದ್ದನು. ತನ್ನ ಪೂರ್ವಿಕರು ಸೇಡಿನ ಹವ್ಯಾಸಕ್ಕೆ ಬೀಳದೆ ಶಾಂತಚಿತ್ತರಾಗಿದುದಕ್ಕಾಗಿ ಅವನು ಅವರನ್ನು ಶ್ಲಾಘಿಸುತ್ತಾ ನಡೆದಿದ್ದಿಲ್ಲ. ತನ್ನ ಪೂರ್ವಜರಲ್ಲಿ ಮಾನವಕೋಟಿಯಲ್ಲಿರಬೇಕಾದ ನೈಸರ್ಗಿಕ ಗುಣವಾದ ಆತ್ಮಗೌರವ ಸ್ವಾಭಿಮಾನಗಳು, ಇಲ್ಲದ್ದಕ್ಕಾಗಿ ಅವರನ್ನು ಜರಿಯುತ್ತಾ ನಡೆದಿದ್ದನು.

ಅವನು, ನೇರವಾಗಿ ತನ್ನ ಪೂಜ್ಯದೈವತವಾದ ಚೈತನ್ಯ ಮೂರ್ತಿಯ ವೇದಿಕೆಯ ವರೆಗೆ ನಡೆದನು. ಹಿಂದೂ ಜನಾಂಗದ ಅಕ್ಷಮ್ಯವಾದ ಅಪರಾಧವನ್ನೂ ತಾನು ದುಃಖಗರ್ತದಲ್ಲಿ ಹಾರಿಕೊಳ್ಳುವ ವಿಷಯವನ್ನೂ ನ್ಯಾಯದೇವತೆಯಾದ

ಚೈತನ್ಯಸ್ವಾಮಿಯು ಎವುರಿನಲ್ಲಿ ನಿವೇದಿಸುವನೇ ನಾರಾಯಣದೇವನ ಅಂತಿಸ ಉದ್ದೇಶವಾಗಿತ್ತು.

ಅವನು ಚೈತನ್ಯಸ್ವಾಮಿಯ ತೇಜೋಮಯ ಮೂರ್ತಿಯನ್ನು ನೋಡಿದೊಡನೆಯೇ ಅವನಲ್ಲಿ ಸದೈವ ಜಾಗೃತವಾಗಿದ್ದ ಭಕ್ತಿರಸವು ತುಂಬಿ ತುಳುಕಿ, ಕಣ್ಣಿನಿಂದ ಧಾರೆಯಾಗಿ ಸುರಿಯಹತ್ತಿತು. ಅವನು ಆ ತೇಜೋಮಯಮೂರ್ತಿಯ ಬಲಭಾಗದಲ್ಲಿ ಮಂಡಿಯೂರಿ ಕುಳಿತನು. ಶಿರಬಾಗಿ, ಕರಮುಗಿದು, ಸಜಲನೇತ್ರಗಳಿಂದ ಒಂದು ಕ್ಷಣ ರೆಪ್ಪೆಹೊಡೆಯದೆ ಆ ಮೂರ್ತಿಯನ್ನು ದಿಟ್ಟಿಸಿ ನೋಡಿದನು. ಅದೊಂದು ತರದ ದಿವ್ಯಶಕ್ತಿಯು ಆತನ ಹೃದಯದಲ್ಲಿ ಹೊಕ್ಕು ಮಾಯವಾಯಿತು. ನೋಡು ನೋಡುತ್ತಿದ್ದಂತೆಯೇ ಆತನ ಬಾಯಿಂದ ಅಸ್ಫುಟವಾಗಿ:—

"ದೇವಾ! ಇಂದು ಒಬ್ಬ ಹಿಂದೂ ವೀರನು ತನ್ನ ಪವಿತ್ರವಾದ ಸನಾತನ ಧರ್ಮದಿಂದ ಹೊರತಾಗಿ ಮುಸಲ್ಮಾನ ಧರ್ಮವನ್ನು ಹೊಂದುವ ಸಾಹಸಕ್ಕೆ ತೊಡಗಿರುವನು. ನನ್ನ ಈ ಧರ್ಮಾಂತರವು ಮಹತ್ತರವಾದ ಅಶ್ಲೀಲ ಕರ್ಮವಾಗಿದ್ದು ಅದಕ್ಕಾಗಿ ನೀನು ನನ್ನನ್ನು ಶಿಕ್ಷಿಸುವದಾದರೆ ಅದರ ಪಾಲುದಾರನು ನಾನೊಬ್ಬನಲ್ಲದೆ ಇಡೀ ಹಿಂದೂ ಜನಾಂಗವೇ ಕಾರಣವಾಗಿದೆಯೆಂಬುದನ್ನು ಸ್ಪಷ್ಟವಾಗಿ ಹೇಳುವೆನು. ಹೇ ಜಗನ್ನಿಯಾಮಕ! ಹಿಂದುಗಳು ನನ್ನನ್ನು ತೂರಿ ಬಿಸುಟಿದ ಮೇಲೆ ನನಗೆ ಹಿಂದುಗಳೇನು? ಮುಸಲ್ಮಾನರೇನು? ತಿರುಗಿ ಕೇಳಿದರೆ, ಇಸ್ಲಾಮಿಯರೇ ನನ್ನ ಅಭ್ಯುದಯಕ್ಕೆ ಕಾರಣಕರ್ತರಾದರೂ ಆದಾರು. ಅವರಲ್ಲಿ ಸದ್ಗುಣಗಳಿಗೆ ಚೆನ್ನಾಗಿ ಬೆಲೆಯಿರುವದು. ನಾನು ಕಾಮಾಂಧನಾಗಿ ಯದುಕುಮಾರಿಯನ್ನು ವರಿಸುವ ಹವ್ಯಾಸಕ್ಕೆ ಬೀಳಲಿಲ್ಲವೆಂಬುದನ್ನು ದೇವದೇವನಾದ ನಿನ್ನ ಸನ್ನಿಧಿಯಲ್ಲಿ ವಿಜ್ಞಾಪಿಸಿಕೊಳ್ಳುವೆನು ನನಗೆ ಈ ಸಮಯದಲ್ಲಿ ಯಾರಾದರೂ ವಿಷಹಾಕಲಿಕ್ಕಿಲ್ಲವೆಂಬದನ್ನು ನಾನು ಹೇಗೆ ಅರಿಯಲಿ? ಸುತ್ತಲೂ ಶತ್ರುಗಳು ನಾಟ್ಯವಾಡುತ್ತಿರುವಾಗ ನನ್ನ ಜೀವನದ ಮೇಲೆ ಶಾಂತಿಯನ್ನು ಹೇಗೆ ಸ್ಥಾಪಿಸಲಿ? ನನ್ನ ಮಾತಾಮಹಿಯು ತೀರ ಮುದುಕಿಯಾದಳು; ನನ್ನ ಕ್ಷೇಮಚಿಂತನೆಯನ್ನು ಹೊರುವಷ್ಟು ಚೈತನ್ಯವು ಅವಳಲ್ಲಿರುವದಿಲ್ಲ. ಇಂಥ ಸನ್ನಿವೇಶದಲ್ಲಿ ನಾನು ಸದ್ಗುಣಿಯಾದ ಗೃಹಿಣಿಯನ್ನು ಹುಡುಕುವದರಲ್ಲಿ ಆಶ್ಚರ್ಯವೇನಿರುವುದು? ಓ ಪುರಾಣಪುರುಷೋತ್ತಮಾ!! ಮುಸಲ್ಮಾನ ಮತವು ನನ್ನ ಸ್ವಾಗತಕ್ಕೆ ಅಪೂರ್ವ ಸಿದ್ಧತೆಯನ್ನು ಮಾಡುತ್ತಿರುವದು. ಇದರಲ್ಲಿ ನನ್ನ ದೋಷವು ಸ್ವಲ್ಪವೂ ಇರುವದಿಲ್ಲವೆಂಬುದನ್ನು ಕೈಯೆತ್ತಿ ಹೇಳುವೆನು. ಆಚಾರಶೀಲರೂ, ಧರ್ಮನಿಷ್ಠರೂ, ಮಠಾಧಿಪತಿಗಳೂ ಎಂದು ಹೇಳಿಕೊಳ್ಳುವ ಈ ಬಹುಕೃತವೇಷಧಾರಿಗಳು ತಮ್ಮಲ್ಲಿರುವ ಬೆಟ್ಟದಂಥ ತಪ್ಪುಗಳನ್ನು ತೃಣಪ್ರಾಯವಾಗಿ ಎಣಿಸಿ, ಅನ್ಯರ ಕಡ್ಡಿಯಂತಹ ತಪ್ಪುಗಳನ್ನು ಬೆಟ್ಟದಂತೆ ಮಾಡುತಲಿರುವರು. ಇವೆಲ್ಲವೂ ನಿನಗೆ ಸಹನವಾಗುವದೋ ಹೇಗೆ? ಹೇ ಜಗತ್ಪಾಲಕ, ಹೇ ದಯಾನಿಧೇ, ನಾನು ನಿನಗೆ ಯಾವ ಅಪರಾಧವನ್ನು ಮಾಡಿದ್ದೆನು? ನನ್ನ ಅಪರಾಧವು ಮಹತ್ತರವಿದ್ದು ನಿನ್ನ ಶಿಕ್ಷೆಯು ಅಲ್ಪಸ್ವಲ್ಪವಾದ್ದಾ

ಜನೆ ಅದನ್ನೂ ಹೋಂದಲಿಕ್ಕೆ ನಾನು ಸಿದ್ಧನೇ ಇರುವೆನು. ಒಬ್ಬನು ಮಾಡಿದ ತಪ್ಪಲ್ಲದ ತಪ್ಪಿನ ಫಲವನ್ನು ಆತನೂ ಆತನ ಸಂತತಿಯೂ ಅನುಭವಿಸಬೇಕೆಂದು ನನ್ನ ಅಂಶರಾತ್ಮನಾದ ನೀನು ಬಯಸುವೆಯಾದರೆ ನನ್ನ ಈ ಅಶಾಶ್ವತವಾದ ದೇಹವನ್ನು ನೀಗಿ ಪುನರ್ಜನ್ಮಕ್ಕೆ ಅವಕಾಶವನ್ನು ಕಲ್ಪಿಸಿಕೊಳ್ಳುವೆನು. ಹಾಯ್! ಹಾಯ್! ನನ್ನ ಪೂರ್ವಜರು ಹಿಂದುಗಳ ಅಸ್ತಿತ್ವಕ್ಕಾಗಿ ಹೆಣಗಿ, ಕಡೆಯಲ್ಲಿ ತಮ್ಮ ಸಂತತಿಯವರಿಗೆ ಎಂಥ ಅವಮಾನಪೂರ್ವಕ ಕಷ್ಟವನ್ನು [illegible] ದರು? ಓ ವಿಶ್ವವಾಪಿಯೇ, ಮಾನವನಲ್ಲಿರಬೇಕಾದ ಮಾರ್ದವ ಹೃದಯವು ಹಿಂದೂ ಜನಾಂಗದಲ್ಲಿದ್ದಿದ್ದರೆ ಹಿಂದುಗಳ ಉತ್ಥಾನವು ಶೀಘ್ರಗಾಮಿಯಾಗುವದೆಂದು ಹೇಳಲಿಕ್ಕೆ ಬರುವಂತಿತ್ತು. ಹಿಂದು ಜನಾಂಗವು ಹಿಂದು ಅಬಲೆಯರ ಮೇಲೆ ತಮ್ಮ ದಬ್ಬಾಳಿಕೆಯನ್ನು ಯಾವ ರೀತಿಯಲ್ಲಿ ನಡೆಸಿರುವದೆಂಬುವದನ್ನು ವೀರಸಾಲಿನ ಮನೆಯಲ್ಲಿಯೇ ನಡೆದ ನನ್ನ ಅನುಭವದಿಂದ ವ್ಯಕ್ತವಾಗದಿರದು. ನೋಡು-ನೋಡು. ಹಿಂದುಗಳ ಅಸುವನ್ನು ಹೀರಬೇಕೆಂದಿರುವ ನನ್ನ ಬಾಹುಗಳು ಪುನಃ ಸ್ಫೂರ್ತಿಗೊಳ್ಳತೊಡಗಿರುವವು! ಹಿಂದುಗಳು ಮಾಡಿದ ಅಪರಾಧದ ಪರಿಣಾಮವು ಘೋರವಾಗುವದು; ನಿಜವಾಗಿಯೂ ಘೋರವಾಗುವದು."

ಆತನ ಮುಖದಿಂದ ಈ ಮೇರೆಗೆ ಮಾತುಗಳು ಹೊರಡುತ್ತಿರುವಾಗ ಆತನಿಗೆ ದುಃಖದಿಂದ ಮತ್ತೆ ಬಂದಂತಾಯಿತು. ಅವನಿಗೆ ಆ ತಂದ್ರಾವಸ್ಥೆಯಲ್ಲಿಯೇ ಆ ಚೈತನ್ಯಸ್ವಾಮಿಯ ಕನಕಮಯ ವಿಗ್ರಹವು ಮಾತನಾಡುತ್ತಿರುವಂತೆ ಭಾಸವಾಯಿತು.

"ವತ್ಸಾ! ಏಳು-ಏಳು. ಹಿಂದುಗಳು ತಪ್ಪು ಮಾಡಿದರೆಂದು ಆದರ ಸೇಡು ತೀರಿಸಿಕೊಳ್ಳಲುದ್ಯುಕ್ತನಾಗಬೇಡ. ದಿನದಿನಕ್ಕೆ ನಶಿಸಿ ಹೋಗುತ್ತಲಿರುವ ಹಿಂದೂ ಧರ್ಮವು ಸೇಡಿನ ಹವ್ಯಾಸದಿಂದ ಮತ್ತಿಷ್ಟು ಜರ್ಜರಿತವಾಗುವದರಲ್ಲಿ ಸಂಶಯವಿಲ್ಲ. ಸದ್ಯದಲ್ಲಿ ಆಲಂಗೀರನು ಕುಲಯುವತಿಯರ ಶೀಲಹರಣವನ್ನೂ, ಹಿಂದುಗಳ ಪ್ರಾಣಹರಣವನ್ನೂ, ಹಿಂದೂಧರ್ಮದ ಧರ್ಮಹರಣವನ್ನೂ ಮಾಡಲು ಅವ್ಯಾಹತ ಪ್ರಯತ್ನವನ್ನು ನಡೆಸಿರುವನು. ಅವನಿಗೆ ವಿರೋಧವಾಗಿ ನಿಂತು, ಸನಾತನ ಧರ್ಮದ ಗೌರವವನ್ನು ಕಾಯುವದು ನಿನ್ನಂಥ ಶೂರನಿಗೆ ಭೂಷಣವಾಗಿರುವುದು. ಸೇಡು ತೀರಿಸಿಕೊಳ್ಳುವ ರಭಸದಲ್ಲಿ ಹಿಂದೂಧರ್ಮಕ್ಕೆ ಭಂಗ ಬರದಂತೆ ನಡೆದುಕೋ; ಹಿಂದೂ ಸುವಾಸಿನಿಯರ ಸತೀತ್ವಕ್ಕೆ ಕುಂದು ಬರದಂತೆ ಎಚ್ಚರಿಕೆ ವಹಿಸು. ಅದೋ, ಆಲಂಗೀರನ ವಜ್ರಾಘಾತವು ದೇವಮೂರ್ತಿಯ ಮೇಲೆ ಬೀಳತೊಡಗಿದೆ. ಏಳು-ಏಳು, ಪವಿತ್ರ ಧರ್ಮದ ರಕ್ಷಣೆಗೆ ಸಿದ್ಧನಾಗು."

ನಾರಾಯಣದೇವನ ಹೃದಯದಲ್ಲಿ ಏನೋ ಒಂದು ವಿಧವಾದ ವ್ಯತ್ಯಾಸವಾದಂತಾಯಿತು. ಕೂಡಲೆ ಅವನಿಗೆ ಶೋಕ ಸಂತಾಪಗಳಿಂದುಂಟಾದ ಒಂದು ವಿಧವಾದ ಮತ್ತವು ಇಳಿದಂತಾಗಿ ಕಣ್ಣು ತೆರೆದು ಸುತ್ತಲೂ ನೋಡಿದನು. ಆತನ ಮಾತಾ [illegible] ಕರುಣಾಜನಕವಾದ ಚಿತ್ರವು ಆತನ ಪಕ್ಕದಲ್ಲಿ ನಿಂತಿದ್ದಿತು. ನಾರಾಯಣ

ದೇವನು ತನ್ನನ್ನು ನೋಡಿದ ಕೂಡಲೆ ಆ ಮುದುಕಿಯು: "ನಾರಾಯಣಾ, ಮಥುರೆಯ ಕೇಶವರಾಯನ ದೇವಾಲಯವನ್ನು ಉಧ್ವಸ್ತಗೊಳಿಸುವ ಸಲುವಾಗಿ ಆಲಂಗೀರನ ಸೈನ್ಯವು ಹೊರಟಿರುವುದು. ಆಲಂಗೀರನು ಈ ಕೆಲಸಕ್ಕಾಗಿ ದಂಡನಾಯಕನಾದ ಸೂಲಪಿಕರಖಾನನನ್ನು ಸೈನ್ಯಸಹಿತನಾಗಿ ಕಳುಹಿಸಿರುವನು. ಈ ವಿಚಾರವನ್ನು ನಿನಗೆ ತಿಳಿಸಿ, ದೇವಾಲಯದ ರಕ್ಷಣೆಗೆ ಬರುವಂತೆ ಒಂದು ಸಂದೇಶವನ್ನು ಮಥುರೆಯ ಒಬ್ಬ ಸರದಾರನು ತಂದಿರುವನು."

"ಏನು? ಮಥುರೆಯ ಪ್ರಸಿದ್ಧ ದೇವಾಲಯವನ್ನು ಮುತ್ತಲು ಆಲಂಗೀರನ ಸೈನ್ಯವು ಹೊರಟಿರುವುದೆ?" ವಿಸ್ಮಯದಿಂದ ನಾರಾಯಣದೇವನು ಹೀಗೆ ನುಡಿದವನೇ "ಒಳ್ಳೇದು. ನಡೆ, ದುರ್ಗಾಚರಣಾ!" ಎಂದು ಕೂಗುತ್ತಾ ಹೊರ ಹೊರಟನು. ಉಷ್ಣ ರಕ್ತದ ಪಿಂಡವು ಸ್ವಾಭಿಮಾನ, ಸ್ವದೇಶಾಭಿಮಾನ, ಸ್ವಜನಾಭಿಮಾನವನ್ನು ಒಮ್ಮೆಲೆ ಹೇಗೆ ತೊರೆದೀತು? ಮೇಲ್ತರಗತಿಯ ಮಾನವನ ವಿಚಾರವು ಹೀಗೆಯೇ ಸರಿ.

---

## ಎಲಾ! ಇವಳು ಆಡಿದ್ದೇನು; ಈಗ ಮಾಡಿದಳೇನು!!

ಮಥುರೆಯ ಕೇಶವರಾಯನ ಗುಡಿಯು ಆಲಂಗೀರ ಬಾದಶಹನಿಂದ ಕಳುಹಿಸಲ್ಪಟ್ಟ ಯವನರಿಂದ ಮುತ್ತಲ್ಪಟ್ಟಿತ್ತು. ಹಿಂದುಗಳ ವೈಭವದ ಕೇಂದ್ರಸ್ಥಾನವಾದ ದೇವಾಲಯವನ್ನು ನಾಶಮಾಡುವದಕ್ಕಾಗಿ ಸೇನಾಪತಿಯು ಉತ್ಸುಕನಾಗಿದ್ದನು. ಅನೇಕ ಹಿಂದೂ ವೀರರ ಅಸುವನ್ನು ಹೀರಿ ಅವನು ದೇವಾಲಯದ ವರೆಗೆ ಬಂದಿದ್ದನು. ಹಿಂದುಗಳು ಇನ್ನೂ ಪರಾಜಿತರಾಗಿದ್ದಿಲ್ಲವಾದುದರಿಂದ ಅವನಿಗೆ ದೇವಾಲಯವನ್ನು ಪ್ರವೇಶಿಸುವದು ಅಷ್ಟೊಂದು ಸುಲಭವಾಗಿದ್ದಿಲ್ಲ. ಸೇನಾಪತಿಯಾದರೂ ತನ್ನೊಡನೆ ಹೆಚ್ಚು ಸೈನ್ಯವನ್ನು ತಂದಿದ್ದಿಲ್ಲ. ಹಿಂದುಗಳನ್ನು ಕೈಲಾಗದ ಹೇಡಿಗಳೆಂದು ತಿಳಿಯುವ ಮುಸಲ್ಮಾನ ಮುತ್ಸದ್ದಿಗಳಲ್ಲಿ ಸೂಲಪಿಕರಖಾನನು ಅಗ್ರೇಸರನಾಗಿದ್ದನು. ಅವನು ಸುಮಾರು ಆರುನೂರು ಜನ ಆರಿಸಿದ ದಂಡಾಳುಗಳೊಡನೆ ಮಥುರೆಯ ಮೇಲೆ ಸಾಗಿ ಬಂದಿದ್ದನು. ಬಹಳ ವೇಳೆಯವರೆಗೆ ಕಾದಿದರೂ ಹಿಂದುಗಳು ಮಣಿಯದ್ದರಿಂದ ಅವನು ತನ್ನ ಸೈನಿಕರಿಗೆ ಒಳ್ಳೇ ಪ್ರೋತ್ಸಾಹವನ್ನು ಕೊಟ್ಟು ಮುಂದೆ ನುಗ್ಗುವಂತೆ ಅಪ್ಪಣೆ ಮಾಡಿದನು.

ಯವನರು ಆಕಸ್ಮಿಕವಾಗಿ ದೇವಾಲಯವನ್ನು ಮುತ್ತಿದ್ದರಿಂದ, ದೇವಾಲಯದಲ್ಲಿ ತಮ್ಮ ವಸತಿಯನ್ನೇರ್ಪಡಿಸಿಕೊಂಡಿದ್ದ ಬಾವಾ-ಬೈರಾಗಿಗಳು ಒಮ್ಮೆಲೆ ಹೌಹಾರಿದರು. ಶತ್ರುಗಳು ಹೀಗೆ ಮುತ್ತುವರೆಂಬ ಕಲ್ಪನೆ ಸಹ ಇವರಿಗಿದ್ದಿಲ್ಲ. ಅವರಲ್ಲಿ ಕೆಲವರು ತಮ್ಮ ಜಪ-ತಪಗಳಲ್ಲಿ ತೊಡಗಿದ್ದರೆ, ಮತ್ತೆ ಕೆಲವರು ಹಸ್ತ-ಮಸ್ತಕದ ಮಾರ್ಜನೆಯಲ್ಲಿ ತೊಡಗಿದ್ದರು. ಇನ್ನು ಕೆಲವರು ಉದ್ದನಾದ ಚಿಲುಮೆಗಳಿಗೆ ತಂಬಾಕದ ಪುಡಿಯನ್ನು ತುಂಬಿ ಅದನ್ನು ಹೊತ್ತಿಸುವ ಕಾರ್ಯವನ್ನು ನಡೆಸಿದ್ದರು.

ಅಷ್ಟು ಜನ ಬಾವಾ-ಬೈರಾಗಿಗಳಿದ್ದರೂ ಆ ಸ್ಥಳವು ನೀರವವೂ ಗಾಂಭೀರ್ಯವೂ ಆಗಿದ್ದಿತು. ಆಗಾಗ ಜಪಮಾಲೆಯನ್ನು ಎತ್ತಿ ಎತ್ತಿ ಬಿಡುವ 'ಕಟ' 'ಕಟ' ಎಂಬ ಸಣ್ಣ ಶಬ್ದವು ಮಾತ್ರ ಆ ನೀರವ ವಾತಾವರಣಕ್ಕೆ ಸ್ವಲ್ಪ ಭಂಗವನ್ನುಂಟುಮಾಡುತ್ತಿತ್ತು.

ಆ ಬೈರಾಗಿಗಳು ಮೊದಮೊದಲು ಯವನರು ದೇವಾಲಯವನ್ನು ಮುತ್ತಿರುವರೆಂದು ತಿಳಿದೇ ಇರಲಿಲ್ಲ; ಆದರೆ ಹೊರಗಿನ ಗಲಭೆಯನ್ನು ನೋಡಿ ಒಬ್ಬಿಬ್ಬ ಗೋ-ಸಾವಿಗಳು ಹೊರಗೆ ಬಂದು ನೋಡಿದರು. ಆಗ ಅಲ್ಲಿನ ಭೀಕರ ದೃಶ್ಯವು ಅವರ ಕಣ್ಣಿಗೆ ಕಟ್ಟಿತು. ತಾವು ಆ ಸಂದರ್ಭದಲ್ಲಿ ಏನು ಮಾಡಬೇಕೆಂಬುದು ಅವರಿಗೆ ತಿಳಿಯದಾಯಿತು. ಬಾವಾಗಳೆಲ್ಲರೂ ಒಂದೆಡೆಯಲ್ಲಿ ಕುಳಿತು ಆಲೋಚನೆ ನಡೆಸಿದರು. ಬಹಳ ವೇಳೆಯ ವರೆಗೆ ಚರ್ಚೆ ನಡೆದ ಬಳಿಕ, ದೇವಾಲಯ ರಕ್ಷಣೆಗೆ ಸಿದ್ಧರಾಗುವುದೇ ನಿಶ್ಚಯವೆಂಬುದನ್ನು ಎಲ್ಲರೂ ಧೃಢಪಡಿಸಿಕೊಂಡರು. ಅಷ್ಟುಜನ ಯವನರ ಮುಂದೆ ನಿರಾಯುಧರಾಗಿ ಕಾದುವುದರಿಂದ ತಾವು ಪ್ರಾಣಕ್ಕೆ ಎರವಾಗಬೇಕಾಗುವುದೆಂಬುದು ಅವರಿಗೆ ನಿಚ್ಚಳವಾಗಿ ತೋರಹತ್ತಿತು. ಆದರೂ ಉಧ್ವಸ್ತಗೊಳಿಸುವ ಕಾರ್ಯವನ್ನು ಕಣ್ಣಾರೆ ನೋಡುವ ಬದಲು ಸಾಯುವುದೇ ಮೇಲೆಂದು ಬಗೆದು ತಮ್ಮ ಗಂಟು ಮೊಟ್ಟೆಗಳನ್ನು ಕಟ್ಟಿದರು. ಯವನರು ಜಯಶಾಲಿಗಳಾಗಿ ಮುಂದೆ ಬಂದಲ್ಲಿ, ದೇವ ವಿಗ್ರಹವನ್ನು ಸನ್ಮಕ್ಕೆ ನೆಲದಲ್ಲಿ ಅಡಗಿಸಿ ರಕ್ಷಿಸಬೇಕೆಂದು ಬಗೆದು ಅದಕ್ಕಾಗಿ ನಾಲ್ಕು ಜನ ಗೋಸಾವಿಗಳು ದಂಡಧಾರಿಗಳಾಗಿ ಒಳಗೇ ನಿಲ್ಲಬೇಕೆಂದು ಯೋಜಿಸಲ್ಪಟ್ಟರು ತಮ್ಮ ಕೈಯಲ್ಲಿ ಯುದ್ಧೋಪಯುಕ್ತ ಯಾವ ಆಯುಧಗಳೂ ಇರದ್ದರಿಂದ ಅವರು ತಮ್ಮ ಉದ್ದವಾದ ದಂಡದ ತುದಿಯನ್ನು ಕೆತ್ತಿ ತತ್ಕಾಲಿಕ ಆಯುಧವನ್ನಾಗಿ ಮಾಡಿಕೊಂಡರು. ತಮ್ಮ ಗಂಟುಗಳನ್ನು ಗಟ್ಟಿಯಾಗಿ ಬಿಗಿದು ಕಟ್ಟಿ, ಖಡ್ಗಾಘಾತಗಳನ್ನು ಉಪಶಮನ ಮಾಡುವ ಢಾಲುಗಳಂತೆ ಮಾಡಿಕೊಂಡರು. ತಮ್ಮ ಭವನಾಶಿಯೇ ಮೊದಲಾದ ಸಕಲ ವಸ್ತುಗಳನ್ನೂ ಕುಟ್ಟಿ ಚೂಪನೆಯ ಚೂರುಗಳನ್ನು ಹೇರಳವಾಗಿ ಸಂಗ್ರಹಿಸಿಕೊಂಡರು. ಹೀಗೆ ಆ ಸಾಧುಗಳು ತಮ್ಮ ಆಯುಧಗಳನ್ನು ಕಲ್ಪಿಸಿಕೊಂಡು ದೇವಾಲಯದ ಎತ್ತರವಾದ ಪೌಳಿಗಳನ್ನು ಹಾರಿ ಹೊರಬಿದ್ದರು.

ಸಾಧುಗಳು ಹೊರಬಿದ್ದ ದೃಶ್ಯವು ಕಂಡೊಡನೆಯೇ ಯವನರು ಸ್ಫೂರ್ತಿಗೊಂಡರು. ಆ ಬಾವಾಗಳ ತಲೆಯನ್ನು ಹಾರಿಸುವದಕ್ಕಾಗಿ ಅವರು ಮುಂದೆ ಮುಂದೆ ನುಗ್ಗತೊಡಗಿದರು. ಸಾಧುಗಳ ಬಡಿಗೆಯ ಬರ್ಚಿಗಳೂ, ಭವನಾಶಿಯ ಗೋಲಕಗಳೂ, ಬಟ್ಟೆಯ ಢಾಲುಗಳೂ ಎಲ್ಲಿಯವರೆಗೆ ತಡೆದಾವು? ಸ್ವಲ್ಪ ಹೊತ್ತಿನೊಳಗಾಗಿಯೇ ಸಾಧುಗಳ ತಲೆಯು ಒಂದೊಂದಾಗಿ ನೆಲಕ್ಕುರುಳಿಯತೊಡಗಿತು.

ಸೇನಾಪತಿಯು ಅಶ್ವಾರೋಹಿಯಾಗಿ ಬಹುಹಿಂದೆ ನಿಂತಿದ್ದನು. ಅವನು ತನ್ನ ಭವಿಷ್ಯತ್ಕಾಲೀನ ಶ್ರೇಯಸ್ಸನ್ನು ಚಿಂತಿಸುತ್ತ ಕುಳಿತಿದ್ದನು. 'ದೇವಾಲಯದ ನಗ-ನಾಣ್ಯಗಳು ಕೈವಶವಾದೊಡನೆಯೇ ಮಥುರೆಯ ಮೇಲೆ ದಾಳಿ ನಡಿಸಬೇಕು, ತನಗೆ ಸಿಕ್ಕ ಸುಂದರ ಸ್ತ್ರೀಯರಲ್ಲಿ ಒಬ್ಬಳನ್ನು ತಾನು ಆಗಲೇ ಲಗ್ನಮಾಡಿಕೊಂಡುಬಿಡ

ಬೇಕು, ದೇವಾಲಯದ ನಗ-ನಾಣ್ಯಗಳಲ್ಲಿ ಉತ್ತಮೋತ್ತಮವಾದ ಸರುಕುಗಳನ್ನು ಆರಿಸಿಕೊಳ್ಳಬೇಕು, ಉಳಿದವುಗಳನ್ನು ಬಾದಶಹನಿಗೆ ಕೊಡಬೇಕು.' ಮುಂತಾಗಿ ಆಲೋಚಿಸುವನು. ಉತ್ತರಕ್ಷಣದಲ್ಲಿ 'ಅವನು ಬೇಡ ಬೇಡ, ನಾನು ಈ ಕಾಫರರಿಂದ ಸುಲಿದ ಹಣವೆಲ್ಲವನ್ನೂ ಶಾಹೇನಶಹನಿಗೇ ಕೊಟ್ಟುಬಿಡಬೇಕು. ಆಗ ಬಾದಶಹನು ನನ್ನ ಸಾಮರ್ಥ್ಯಕ್ಕೂ ನಿಸ್ಪೃಹತನಕ್ಕೂ ಮೆಚ್ಚಿ ಅವೆಲ್ಲವನ್ನೂ ನನಗೇ ತಿರುಗಿ ಕೊಡಬಾರದೇಕೆ? ಇಷ್ಟೇ ಅಲ್ಲ, ಅವನು ನನ್ನ ಸಾಮರ್ಥ್ಯಕ್ಕೆ ಮೆಚ್ಚಿ ತನ್ನ ಮುಖ್ಯ ವಜೀರನನ್ನಾಗಿ ಮಾಡಿಕೊಂಡರೂ ಮಾಡಿಕೊಂಡಾನು. ಬಾದಶಹನು ಸಂತುಷ್ಟನಾದರೆ ವಜೀರತನವನ್ನಿಷ್ಟೇ ಅಲ್ಲ; ತನ್ನ ಮಗಳಾದ ಬದ್ರುನ್ನಿಸೆಯನ್ನು ಕೊಟ್ಟು ವಿವಾಹ ಮಾಡಿದರೂ ಮಾಡಿಯಾನು. ಬಾದಶಹನ ಅಳಿಯನಾಗುವ ಈ ಅಮೃತ ಸಂಧಿಯನ್ನು ಖುದಾನು ನನಗೆ ದಯಪಾಲಿಸಿರುವನು............' ಖಾನನ ಆಲೋಚನೆಯು ಹೀಗೆ ಅಂತಸ್ತನ್ನೆರುತ್ತ ನಡೆದಿದ್ದಿತು. ಅಷ್ಟರಲ್ಲಿಯೇ ಆ ಸಾಧುಗಳು ಹೊರಬಿದ್ದು ಸಾಯಹತ್ತಿದ ಮೇಲಂತೂ ಆತನ ಅಟ್ಟಹಾಸಕ್ಕೆ ಮೇರೆಯಿಲ್ಲವಾಯಿತು.

ಖಾನನು ಆನಂದತುಂದಿಲನಾಗಿ ಶ್ವೇತಾಶ್ವವನ್ನೇರಿ ಸೈನ್ಯದ ಎಲ್ಲಕ್ಕೂ ಹಿಂಭಾಗದಲ್ಲಿ ನಿಂತಿದ್ದನು. ಆ ಬಾವಾಗಳ ಶಿರಕಮಲಗಳು ನೆಲಕ್ಕುರುಳತೊಡಗಿದ ಮೇಲಂತೂ ಅವನಿಗೆ ಹರ್ಷೋನ್ಮಾದವಾದಂತಾಗಿತ್ತು. ಅವನು ಆ........ಎಂದು ಬಾಯಿತೆರದು ಯುದ್ಧರಂಗವನ್ನು ನೋಡುತ್ತ ನಿಂತುಬಿಟ್ಟಿದ್ದನು. ಅವನ ಬಾಯಿಯ ದುರ್ಗಂಧಕ್ಕೆ ಮನಸೋತ ನೊಣ-ನೊರಜುಗಳು ಖಾನನ ಬಾಯಲ್ಲಿ ಹೊಕ್ಕು ಹೊಕ್ಕು ಹೊರಡುತ್ತಿದ್ದವು. ಅಂಥ ಆನಂದದ ಸಮಯದಲ್ಲಿ ನೊಣ ನೊರಜುಗಳಂಥ ಅಲ್ಪಪ್ರಾಣಿಗಳು ತನ್ನ ಬಾಯಲ್ಲಿ ಹೊಕ್ಕು ಹೊರಡುವವೆಂಬ ವಿಚಾರವು ಖಾನನಿಗೆ ಆಗ ಹೇಗಾಗಬೇಕು? ಆತನು ಆಡಿಗಡಿಗೆ ತನ್ನ ಕರಾಳ ವದನದ ಮೇಲಿರುವ ಮೀಸೆಯನ್ನು ತಿರುವುತ್ತ ವಿಕಟವಾಗಿ ನಗುತ್ತಿದ್ದನು.

"ಹಾ! ಮುಂದೆ ನುಗ್ಗಿರಿ; ಕೈ ಮಿಂಚಿಹೋದೀತು."

ಯವನ ಸೈನ್ಯದಲ್ಲಿ ಹೀಗೆ ವಿಲಕ್ಷಣವಾದ ಅಟ್ಟಹಾಸವಾಗುತ್ತಿರಲು, ಒಬ್ಬ ವೀರನು ಮೇಲೆ ಹೇಳಿದಂತೆ ತನ್ನ ಸೈನಿಕರಿಗೆ ಹೇಳುತ್ತಾ ಶೀಘ್ರಗತಿಯಿಂದ ಬರುತ್ತಿದ್ದನು ಅವನು ಯವನ ಸೈನ್ಯವನ್ನು ಸಮೀಪಿಸಿದೊಡನೆಯೇ ಎಲ್ಲಕ್ಕೂ ಹಿಂಬದಿಯಲ್ಲಿದ್ದ ಖಾನನ ಕರಾಳ ಕೃತಿಯನ್ನು ನೋಡಿದನು. ಕೂಡಲೆ ಆಗಂತುಕನು ತನ್ನ ಮೊಣಕೈಯಿಂದ ಖಾನನ ಎಡಪಕ್ಕಕ್ಕೆ ಬಲವಾಗಿ ತಿವಿದನು. ಸೇನಾಪತಿಯು 'ಯಾ, ಖುದಾ!' ಎಂದೆನ್ನುತ್ತಾ ಕೆಳಗೆ ಬಿದ್ದನು.

ಒಂದೇ ಒಂದು ಕ್ಷಣದಲ್ಲಿಯೇ ಕದನದ ಸ್ವರೂಪವೇ ಬದಲಾಯಿತು. ಶತ್ರುನಿಗ್ರಹ ಮಾಡಿ ದೇವಾಲಯವನ್ನು ಪ್ರವೇಶ ಮಾಡಬೇಕೆನ್ನುವಷ್ಟರಲ್ಲಿಯೇ ಒಂದು ಕಡೆಯಿಂದ ವಿಜಾಪುರದ ಕೆಲವು ಸೈನ್ಯವೂ, ಇನ್ನೊಂದು ಕಡೆಯಿಂದ ನಾರಾಯಣ

ದೇವನ ಸಣ್ಣ ತುಕ್ಕಡಿಯೂ ದೇವಾಲಯದ ರಕ್ಷಣೆಗೆ ಬಂದುದರಿಂದ ಯವನರು ಕಣ್ಣಿಗಾದರು. ನಾರಾಯಣದೇವನು ತನ್ನ ಶೂರ ದಂಡಾಳುಗಳೊಡನೆ ಯವನರನ್ನು ಸದೆಬಡಿಯತೊಡಗಿದ್ದನು. ಅವನು ತನ್ನ ನೀಳವಾದ ಖಡ್ಗವನ್ನು ಎತ್ತಿ ಇಳಿಸುವಾಗ ಒಂದು ಘಟೋತ್ಕಚವನ್ನು ಭೂಗತ ಮಾಡದೆ ಇರುತ್ತಿದ್ದಿಲ್ಲ. ಖಾನನಿಗೆ ಚೆನ್ನಾಗಿ ಏಟುಬಿದ್ದಿದ್ದರಿಂದ ಆತನು ಯುದ್ಧರಂಗದಿಂದ ಬೇರೆ ಕಡೆಗೆ ಒಯ್ಯಲ್ಪಟ್ಟಿದ್ದನು. ತಮ್ಮ ಸೇನಾಪತಿಯು ರಣಭೂಮಿಯಿಂದ ಜಾರಿದ ವಿಷಯವು ದಂಡಾಳುಗಳಿಗೆ ಹತ್ತಿದ ಬಳಿಕಂತೂ ಅವರು ಮತ್ತಿಷ್ಟು ನಿರ್ವಿಣ್ಣರಾದರು. ಹಿಂದುಗಳ ವಸಾಹತುಗಳನ್ನು ನಾಮಶೇಷ ಮಾಡಿ, ಹಿಂದೂ ಕನ್ಯೆಯರ ಅಪಹರಣವನ್ನು ಮಾಡುವ ಯೋಗವನ್ನು ತಮಗೆ ಅಲ್ಲಾನು ಕರುಣಿಸಲಿಲ್ಲವೆಂದು ಬಗೆದು, ತಾವು ಖಾನನ ಅನುಕರಣವನ್ನು ಅವರು ಮಾಡಹತ್ತಿದರು. 'ಮುಸಲರ ಕೈ ಕೆಳಗಾಯಿತು; ಅವರ ಜೀವಕ್ಕೆ ಧಕ್ಕೆ ತರಬೇಡಿರಿ.' ಎಂಬ ಜನವಾದವು ನಭೋಮಂಡಲವನ್ನು ವ್ಯಾಪಿಸಿತು.

ನಾರಾಯಣದೇವನು ಶಸ್ತ್ರನಿಗ್ರಹವನ್ನು ಹೀಗೆ ಒಂದೇಸಮನೆ ನಡೆಸಿರಲಿಕ್ಕೆ ಅವನಿಗೆ ದುರ್ಗಾಚರಣನು ಕಾಣಿಸಿಕೊಂಡನು. ದುರ್ಗಾಚರಣನು ಯಾವದೋ ಒಂದು ನಿಗೂಢ ವರ್ತಮಾನವನ್ನು ತಿಳಿಸುವದಕ್ಕಾಗಿ ಆತುರಗೊಂಡಿದ್ದನು. ಅವನು ನಾರಾಯಣದೇವನನ್ನು ನೋಡಿದ ಕೂಡಲೆ ಆತನನ್ನು ಒತ್ತಟ್ಟಿಗೆ ಕರೆದೊಯ್ದನು; ಮತ್ತು ನಾರಾಯಣದೇವನನ್ನು ಕುರಿತು: "ಧಣಿಯರೇ, ವೀರಪಾಲನ ಕುಮಾರಿಯರಾದ ಯದುಕುಮಾರಿಯವರು ಬಿಜಾಪುರದ ಇಸ್ಮಾಯಿಲಶಾಹಿಯನ್ನು ವರಿಸಿದವರು. ಆ ನೀಚ ವೀರಪಾಲನೇ ತನ್ನ ಕುಮಾರಿಯನ್ನು ಬಿಜಾಪುರದ ಇಸ್ಮಾಯಿಲನಿಗೆ ಕೊಟ್ಟು ವಿವಾಹ ಮಾಡಿದನಂತೆ."

"ನೀನು ಇದನ್ನು ಈಗ ಹೇಗೆ ತಿಳಿದೆ?" ನಾರಾಯಣದೇವನು ಕೇಳಿದನು.

"ನಾನೇ ಸ್ವತಃ ಯದುಕುಮಾರಿಯವರನ್ನು ನೋಡಿ ಮಾತನಾಡಿ ಬಂದೆನು. ಮೊದ ಮೊದಲು ಅವರ ಗುರುತು ನನಗೆ ಹತ್ತಲಿಲ್ಲ; ಆಮೇಲೆ ನಾನು ಈ ಬಗ್ಗೆ ಅವರನ್ನೇ ಕೇಳಿ ತಿಳಿದುಕೊಂಡೆನು." ದುರ್ಗಾಚರಣನು ತನ್ನ ಮಾತನ್ನು ಮುಂದುವರಿಸಿದನು.

"ನಾನು ಅವರ ಪರಿಚಯವನ್ನು ಮಾಡಿಕೊಳ್ಳಬೇಕಾದರೆ ಏನು ಮಾಡಬೇಕೆಂಬುದು ನನಗೆ ತಿಳಿಯದಾಯಿತು. ಕಡೆಗೆ ನಾನೊಂದು ಯುಕ್ತಿಯನ್ನು ಹುಡುಕಿದೆನು. ನಾನು ವೀರಪಾಲನು ಸತ್ತನೆಂದು ಒಮ್ಮೆಲೆ ಅಂದುಬಿಟ್ಟೆನು. ಇದರಿಂದ ಅವರ ಮನಸ್ಸಿನ ಮೇಲೆ ಯಾವ ವಿಧದ ಪರಿಣಾಮವಾಗುವದೆಂಬುದನ್ನು ತಿಳಿಯುವ ಸಲುವಾಗಿಯೇ ನಾನು ಹಾಗೆ ಬುದ್ಧಿಪೂರ್ವಕವಾಗಿ ಹೇಳಿದೆನು. ಅದು ಸಾಧಿಸಲಿಲ್ಲವಾದರೆ ಬೇರೊಂದು ಉಪಾಯವನ್ನು ಹುಡುಕಿಯೇ ಇಟ್ಟಿದ್ದೆನು. ವೀರಪಾಲರು ನಿಧನರಾದರೆಂದು ಹೇಳಿದೊಡನೆಯೇ ಅವರು ನನ್ನನ್ನು ಯಾರೆಂದು ಕೇಳಿದರು. ನಾನು ವೀರಪಾಲನ ಪ್ರೀತಿಯ ಸೇವಕನೆಂದು ತಿಳಿಸಿದೆನು. ವೀರಪಾಲನ

ಮೃತವಾರ್ತೆಯನ್ನು ಕೇಳಿ ಅವರು ಸ್ವಲ್ಪವೂ ದುಃಖಿಸಲಿಲ್ಲ. ಇದರಿಂದ ನನಗೆ ಅವರು ವೀರಪಾಲನ ಪುತ್ರಿಯುಹುದೋ ಅಲ್ಲವೋ ಎಂಬ ಸಂಶಯವು ಸಹ ಹುಟ್ಟಿತು. ಅಷ್ಟರಲ್ಲಿಯೇ ಅವರು 'ತಂದೆಯ ಮೃತಕಳೇಬರಕ್ಕೆ ಆಗಬೇಕಾದ ಕಾರ್ಯವನ್ನು ನೀನೇ ನೆರವೇರಿಸುವಂತೆ ವ್ಯವಸ್ಥೆ ಮಾಡು. ನಾನು ಅವನ ಪುತ್ರಿಯಾದಾಗ್ಯೂ ಅವನ ಮುಖಾವಲೋಕನವನ್ನು ಸಹ ಮಾಡಲಾರೆನು. ನಾನು ಮೊದಲು ನರನೂರಿನ ಜಹಗೀರದಾರನನ್ನು ಲಗ್ನಮಾಡಿಕೊಳ್ಳಬೇಕೆಂದಿದ್ದೆನು; ಆದರೆ ನನ್ನ ತಂದೆಯು ನನ್ನ ಈ ಮನೋಭಿಪ್ರಾಯಕ್ಕೆ ವಿರೋಧವಾಗಿ ನನ್ನನ್ನು ಬಿಜಾಪುರದ ಸುಲ್ತಾನರಿಗೆ ವಿವಾಹ ಮಾಡಿಕೊಟ್ಟನು. ನಾನು ಸದ್ಯಕ್ಕೆ ಸುಲ್ತಾನರೊಂದಿಗೆ ಸುಖವಾಗಿರುವೆನಾದರೂ ನನ್ನ ತಂದೆಯು ಮಾಡಿದ ಕೃತ್ರಿಮಕಾರ್ಯಕ್ಕಾಗಿ ನನಗೆ ಆಗಾಗ ವಿಷಾದವಾಗುವದು.' ಇನ್ನೂ ಏನೋ ಹೇಳುವುದರಲ್ಲಿದ್ದರು. ಅಷ್ಟರಲ್ಲಿಯೇ ಒಬ್ಬ ತುರುಕನು ನನ್ನ ಮೇಲೆ ಸಾಗಿಬಂದಿದ್ದರಿಂದ ನನ್ನ ಮಾತು ಅಷ್ಟಕ್ಕೆ ನಿಂತಿತು."

ದುರ್ಗಾಚರಣನ ಮಾತುಗಳನ್ನು ಕೇಳಿ ನಾರಾಯಣದೇವನು ಅವಾಕ್ಕಾದನು, ಸ್ತಂಭಿತನಾದನು. ತನ್ನ ಪ್ರೀತಿಪಾತ್ರಳನ್ನು ಬೇರೊಬ್ಬನಿಗೆ, ಅದರಲ್ಲೂ ಯವನನಿಗೆ ಕೊಟ್ಟದ್ದು ಆತನಿಗೆ ಅತ್ಯಂತ ವ್ಯಸನವನ್ನುಂಟುಮಾಡಿತು. ತನ್ನ ಎದುರಿನಲ್ಲಿ ಪಾತಿವ್ರತ್ಯದ ಆಡಂಬರವನ್ನಿಳಿಸಿದ್ದ ಯುದುಬಾಲೆಯು ಬೇರೊಬ್ಬನನ್ನು ವಿವಾಹವಾದದ್ದು ಆತನಿಗೆ ಅತ್ಯಂತ ವಿಸ್ಮಯಜನಕವಾಯಿತು. ಕೂಡಲೆ ತನ್ನ ಸೈನಿಕರಿಗೆ, ಯುದ್ಧವನ್ನು ನಿಲ್ಲಿಸುವಂತೆ ದುರ್ಗಾಚರಣನೊಡನೆ ಹೇಳಿ ಕಳುಹಿಸಿದನು ದುರ್ಗಾಚರಣನು ಅತ್ತ ನಡೆದಬಳಿಕ ನಾರಾಯಣದೇವನು, "ತಪ್ಪು, ಶುದ್ಧ ತಪ್ಪು. ವೀರಪಾಲನು ತನ್ನ ಪುತ್ರಿಯನ್ನು ಯವನನಿಗೆ ಕೊಟ್ಟು ನೀಚತನದ ಪರಾಕಾಷ್ಠೆಯನ್ನು ತೋರಿಸಿದರೂ ಯದುಬಾಲೆಯು ಆತನನ್ನು ವರಿಸತಕ್ಕದ್ದಿದ್ದಿಲ್ಲ. ನನ್ನಲ್ಲಿ ಅನುರಾಗಪಟ್ಟ ಯದುಬಾಲೆಯು ನಿಜವಾಗಿಯೂ ಕುಲಯುವತಿಯಲ್ಲ. ನನ್ನ ಪ್ರತಿಜ್ಞೆಯನ್ನು ನಾನು ನೆರವೇರಿಸಲೇ ಬೇಕು" ಇತ್ಯಾದಿಯಾಗಿ ಆಲೋಚಿಸುತ್ತಾ ಯುದ್ಧರಂಗದಿಂದ ಹಿಂದಿರುಗಿದನು. 'ಎಲಾ! ಇವಳು ಆಡಿದ್ದೇನು; ಈಗ ಮಾಡಿದಳೇನು?' ಎಂಬ ಉದ್ಗಾರವು ಆತನ ಬಾಯಿಂದ ಹೊರಡುತ್ತಿತ್ತು.

---

## ಪೂರ್ವಪ್ರತಿಜ್ಞೆಯ ಸಿಂಹಾವಲೋಕನ

ಇತ್ತ ಖಾನನನ್ನು ಹೊತ್ತುಕೊಂಡು ನಾಲ್ವರು ಸಿಪಾಯಿಗಳು ಹೊರಟಿದ್ದರಷ್ಟೆ? ಅವರು ಖಾನನನ್ನು ಆದಷ್ಟು ವೇಗವಾಗಿ ತೆಗೆದುಕೊಂಡು ಹೋಗುವ ಸಲುವಾಗಿ ಸುಮಾರು ಐದು-ಆರು ಮೈಲುಗಳನ್ನು ಒಂದೇಸಮನೆ ಓಡುತ್ತಲೆ ಸಾಗಿದ್ದರು. ಶತ್ರುಪಕ್ಷದವರು ಎಲ್ಲಿಯಾದರೂ ಅಟ್ಟಿಸಿಕೊಂಡು ಬಂದಲ್ಲಿ ತಮ್ಮ ಒಡೆಯನನ್ನು ರಕ್ಷಿಸುವದು ಅಸಾಧ್ಯವಾಗುವದೆಂಬುವನ್ನು ಮನಗಂಡ ಆ ಸಿಪಾಯಿಗಳು, ಮೇಣೆ

ಯನ್ನು ಮಧ್ಯದಾರಿಯಲ್ಲಿ ಎಲ್ಲಿಯೂ ನಿಲ್ಲಿಸುವ ಸಾಹಸಕ್ಕೆ ಕೈಹಾಕಿದ್ದಿಲ್ಲ. ಖಾನನಿಗೆ ಏಟು ಪೂರಾ ಬಿದ್ದುದರಿಂದ ಅವನಿಗೆ ಮಾತಾಡುವಷ್ಟು ಚೈತನ್ಯವು ಕೂಡ ಉಳಿದಿದ್ದಿಲ್ಲ. ಸಿಪಾಯಿಗಳು ದಾರಿಯ ಉಬ್ಬು-ತಗ್ಗುಗಳನ್ನು ಎಣಿಸದೆ ಒಳ್ಳೇ ವೇಗದಿಂದ ನಡೆದಿದ್ದರು. ಇಳಿಗಡೆ ಬಂದಲ್ಲಿ ಖಾನನ ತಲೆಯು ಮೇಲಾಗುವದು; ಉಬ್ಬಿನಲ್ಲಿ ಖಾನನ ಕಾಲು ಮೇಲಾಗುವದು. ಎಡಕ್ಕೆ ಬಲಕ್ಕೆ ಒಳ್ಳೇ ಒತ್ತರದಿಂದ ಸಿಪಾಯಿಗಳು ಹೊರಳುವಾಗ ಖಾನನ ತಲೆಯು ಮೇಣೆಯ ಹಲಿಗೆಗೆ ತಾಕಿ ಘಾಸಿಯಾಗುಗುವದು. ಹೀಗಾಗಿ ಮೊದಲೇ ಪೆಟ್ಟು ತಿಂದ ಖಾನನು ಮತ್ತಿಷ್ಟು ನಿರ್ವಿಣ್ಣನಾದನು; ಆದರೂ ಅವನು ಮಾತನಾಡುವಂತಿರಲಿಲ್ಲ. ಆದದ್ದನ್ನು ಅನುಭವಿಸುತ್ತ ಮೇಣೆಯ ಕಂಬಿಯನ್ನು ಬಲವಾಗಿ ಹಿಡಿದುಕೊಂಡು ಸುಮ್ಮನೆ ಬಿದ್ದಿದ್ದನು.

ಔರಂಗಜೇಬಬಾದಶಹನು ತನ್ನ ಅರಮನೆಯಲ್ಲಿ ಕುಳಿತಿದ್ದನು. ಅವನ ಪ್ರೀತಿಯ ಮಗಳಾದ ಬದ್ರುನ್ನಿಸೆಯು ತನ್ನ ತಂದೆಯ ಸಮೀಪದಲ್ಲಿ ನಿಂತಿದ್ದಳು. ಆಲಂಗೀರನು ಪಾರತಂತ್ರ ಜನಾಂಗವಾದ ಹಿಂದೀಯರ ಮೇಲೆ ತನ್ನ ಧಾರ್ಮಿಕ ಶಲ್ಯಾಘಾತವನ್ನು ಯಾವ ರೀತಿಯಲ್ಲಿ ಪ್ರಯೋಗಿಸುತ್ತಿರುವನೆಂಬುದನ್ನು ಅವಳು ಕಣ್ಣಾರೆ ಕಂಡಿದ್ದಳು. ಮಥುರಾಪುರಿಯ ಶ್ರೀ ಕೇಶವದೇವಾಲಯವನ್ನು ಉಧ್ವಸ್ತಗೊಳಿಸುವದಕ್ಕಾಗಿ ಬಾದಶಹನು ತನ್ನ ಸೈನ್ಯಪಡೆಯನ್ನು ಕಳುಹಿಸಿದ ಸಂಗತಿಯು ಅವಳಿಗೆ ಅತ್ಯಂತ ವಿಷಾದವನ್ನುಂಟು ಮಾಡಿತ್ತು. ತನ್ನ ತಂದೆಯ ಮನಸ್ಸನ್ನು ಯೋಗ್ಯಕಾಲದಲ್ಲಿ ತಿರುಗಿಸಬೇಕೆಂದು ಬಗೆದು ಆಗ ಸುಮ್ಮನಾಗಿದ್ದಳು. ಬಿದ್ದವರು ಏಳುವದೂ, ಎದ್ದವರು ಬೀಳುವದೂ ಅಸ್ವಾಭಾವಿಕವಲ್ಲನೆಂಬುದನ್ನು ಆ ಯವನ ತರುಣಿಯು ನಿಸ್ಸಂದೇಹವಾಗಿ ತಿಳಿದಿದ್ದಳು. ಐಹಿಕಸುಖವು ಅಶಾಶ್ವತವೆಂಬುದಕ್ಕೆ ನಮ್ಮ ದಾರ್ಮಿಕ ಗ್ರಂಥಗಳಲ್ಲಿ ಹೇರಳವಾದ ಉಲ್ಲೇಖಗಳಿರುವವು. ಆ ಉಲ್ಲೇಖಗಳು ಹೊತ್ತಿಗೆಯಲ್ಲಿ ಮಾತ್ರ ಈಗಲೂ ಕಣ್ಣಿಗೆ ಬೀಳುತ್ತವೆ. ಇತ್ತೀಚೆಗೆ ಅವೂ ಕಣ್ಣಿಗೆ ಬೀಳದಂತೆ ಸಾಹಸಮಾಡುತ್ತಿರುವ ಸನಾತನ ಧರ್ಮಿಗಳನೇಕರನ್ನು ನೋಡಿದರೆ ಯಾರಿಗಾದರೂ ವಿಷಾದವಾಗದಿರದು. ಭಾವನಾವೇಶದಿಂದ ಅನೇಕ ಬಂಧುಗಳು ತಮ್ಮ ತಮ್ಮಲ್ಲಿಯೇ ಕಚ್ಚಾಡಿ ಪುರಾತನಾಚಾರ್ಯರಿಂದ ಬರೆಯಲ್ಪಟ್ಟ ಪವಿತ್ರ ಗ್ರಂಥಗಳನ್ನು ಭಸ್ಮೀಭೂತವಾಗಿ ಮಾಡಿದ ಬಳಿಕ ನಮ್ಮಲ್ಲಿ ಉಳಿಯಿತೇನು? ನೀಚೋಚ್ಚಭಾವವಿಲ್ಲದೆ ಕಚ್ಚಾಡುವ ಜಗಳಗಂಟತನವೂ ಹಾಗೆ ಜಗಳಗಂಟುತನದಿಂದುಂಟಾದ ಸ್ವಕರ್ತವ್ಯಹಾನಿಯೂ, ಸ್ವಕರ್ತವ್ಯ ಹಾನಿಯಿಂದ ಜನಾಂಗದ ವಿನಾಶವೂ, ಜನಾಂಗದ ವಿನಾಶದಿಂದ ಆತ್ಮವಿಪ್ಲವವೂ, ಆತ್ಮವಿಪ್ಲವ ಮಾರ್ಗದಿಂದ ರಾಷ್ಟ್ರದ ಅವನತಿಯೂ ಹೀಗೆ ದುರ್ಗುಣಗಳ ಮುಂದೆ ದುರ್ಗುಣಗಳು ಮಾತ್ರ ನಮ್ಮನ್ನು ಅಂಟಿಕೊಳ್ಳತೊಡಗಿವೆ. ಇರಲಿ.

ಬದ್ರುನ್ನಿಸೆಯು ತನ್ನ ತಂದೆಯ ಮನಸ್ಸನ್ನು ಸತ್ಪಥಗಾಮಿಯಾಗುವಂತೆ ಮಾಡುವಸಲುವಾಗಿ ಒಳ್ಳೇ ಸಲಿಗೆಯಿಂದ ಮಾತಾಡತೊಡಗಿದ್ದಳು. ಕನ್ನಡಿಗರ

ಭಕ್ತಿ-ಗೌರವಗಳಿಗೆ ಕಾರಣವಾದ ವಿದ್ಯಾನಗರೀ ಸಾಮ್ರಾಜ್ಯವೂ ಅವರ ಅಭಿಮಾನಕ್ಕೆ ಪಾತ್ರರಾಗಿದ್ದ ಅವತಾರಸದೃಶರಾದ ರಾಮರಾಯನಂತಹ ವೀರಾಗ್ರಣಿಗಳೂ ಹೇಗೆ ವೈಭವದ ಶಿಖರದಿಂದ ಪದಚ್ಯುತರಾದರೋ, ಹಾಗೆಯೇ ತನ್ನ ತಂದೆಯ ರಾಜ್ಯವಾದರೂ ಚಿರಾಯುವಾಗಿ ನಿಲ್ಲಲಾರದೆಂದು ಆವಳು ಮನಗಂಡಿದ್ದಳು. ಎಂದೆಂದಿಗೂ ಹಿಂದುಗಳ ಕೈಯಲ್ಲಿಯೇ ಉಳಿಯುವದೋ ಎನ್ನುವಂತಿದ್ದ ವಿದ್ಯಾನಗರಿಯು, ಮಾನವೋದ್ಯಾನದಲ್ಲಿ ತನ್ನ ಕೀರ್ತಿಸುಗಂಧವನ್ನು ಬೀರಿ ಭೂಶಾಯಿಯಾಯಿತು. ರಾಮ-ಕೃಷ್ಣ ಸದೃಶರಾದ ರಾಮರಾಯ-ಕೃಷ್ಣದೇವರಾಯರಂಥ ನಿಸ್ವಾರ್ಥ ಹಾಗು ಪ್ರಜೆಗಳ ಕ್ಷೇಮಚಿಂತನೆಯನ್ನು ಕಾಲತ್ರಯದಲ್ಲಿಯೂ ಚಿಂತಿಸುತ್ತಿರುವ ಪ್ರಭುಗಳ ಆದರ್ಶಗುಣಗಳೂ ಆಗಿನ ಕಾಲದ ಜನಾಂಗದಲ್ಲಿನ ವಿಶ್ವಭ್ರಾತೃತ್ವ ಮೊದಲಾದ ಗುಣಗಳೂ ನಮ್ಮೆದುರಿನಲ್ಲಿ ನಿಂತು ಆ ಮಹಾಸಾಮ್ರಾಜ್ಯದ ನೆನಪು ಕೊಡುವದಲ್ಲದೆ, ಅಲ್ಲಿಯ ಭಗ್ನಾವಶೇಷದ ಸ್ಥಳಗಳಾಗಲಿ, ಘಟಾನು-ಘೋಟಕಗಳ ಸಂಭ್ರಮಗಳಾಗಲಿ ಯಾರ ನೆನಪಿಗೂ ಬಾರದು; ಬಂದರೂ ಅಭಿಮಾನವೆನಿಸದು; ಅಭಿಮಾನವೆನಿಸಿದರೂ ಅದಕ್ಕೆ ಮೂಲಕಾರಣವಾಗಿರುವದೆಂದರೆ ತತ್ಕಾಲೀನ ರಾಜರ ಹಾಗೂ ಪ್ರಜೆಗಳ ಬೃಹದಾದರ್ಶ, ನಿಸ್ಪೃಹತೆ ಮೊದಲಾದ ಗುಣಗಳೇ ಅಲ್ಲವೆ? ಈ ವಿಚಾರವೆಲ್ಲವನ್ನೂ ಒಮ್ಮೊನಸ್ಸಿನಿಂದ ತಿಳಿದಿದ್ದ ಶಹಜಾದಿಯು-ಬದ್ರುನ್ನಿಸೆಯು-ತನ್ನ ತಂದೆಯ ಮನಸ್ಸನ್ನು ಸುಪರಿಣಾಮಕಾರಕವಾಗುವಂತೆ ಮಾಡುವ ಸಲುವಾಗಿ:—

"ಅಪ್ಪಾ! ಸನಾತನಿಗಳ ಸ್ವಾತಂತ್ರ್ಯವನ್ನು ನೀವು ಸಂಪೂರ್ಣವಾಗಿ ಸೆಳದುಕೊಂಡಿರುವಿರಿ; ಆದರೆ ನೀವು ಅಷ್ಟರಿಂದ ತೃಪ್ತರಾಗದೆ, ಅವರ ಧಾರ್ಮಿಕ ವಿಷಯದಲ್ಲಿಯೂ ಕೈ ಹಾಕತೊಡಗಿರುವಿರಿ. ಇದರಿಂದ ಯವನರಿಗೂ ಹಿಂದೀಯರಿಗೂ ಪ್ರಬಲವಾದ ದ್ವೇಷವು ಬೆಳೆದು ದೇಶದ ಶಾಂತಿಗೆ ಭಂಗ ಬರುವದು. 'ರಾಜಾ ಪ್ರತ್ಯಕ್ಷದೇವತಾ' ಎಂಬೆನ್ನುವ ಹಿಂದುಗಳನ್ನು 'ರಾಜಾ ಪ್ರತ್ಯಕ್ಷ ದಾನವಾ' ಎಂದೆನ್ನುವಂತೆ ಮಾಡಿ ಮೊಗಲರ ಕೀರ್ತಿಯು ವಿನಾಶ ಮಾಡಬೇಡಿರಿ. ಬಲಾತ್ಕಾರದಿಂದ ಹಿಂದೀಯರನ್ನು ಧರ್ಮಾಂತರ ಗೊಳಿಸುವದರಿಂದ, ಅವರು ಮುಸಲ್ಮಾನ ಮತದ ಉಚ್ಚಾಟನೆಗೆ ಕಾರಣಕರ್ತರಾದಾರೇ ವಿನಃ ಮುಸಲ್ಮಾನರಿಗೆ ಎಂದೂ ಬೆಂಬಲರಾಗಿ ನಡೆಯಲಿಕ್ಕಿಲ್ಲ."

"ಶಹಜಾದಿ, ಹಿಂದೂತಾಯಿಯ ಗರ್ಭದಲ್ಲಿ ಜನಿಸಿದ ನೀನು ಹೀಗೆ ಮಾತನಾಡುವದು ಸಯುಕ್ತಿಕವಾಗಿದೆ. ಹಿಂದೀಯರನ್ನು ಒಮ್ಮೆ ಮುಸಲ್ಮಾನರನ್ನಾಗಿ ಮಾಡಿ ಬಿಟ್ಟೆವೆಂದರೆ, ಪುನಃ ತಮ್ಮ ಸಮಾಜಕ್ಕೆ ಸೇರಿಸಿಕೊಳ್ಳುವುದಕ್ಕೆ ಅವರ ಸಮಾಜವು ಒಪ್ಪುವದಿಲ್ಲ. ಆಗ ಅವರವರಲ್ಲಿ ಯಾದವೀ ಕಲಹವುಂಟಾಗಿ ಮೂರನೇಯವರಿಗೆ ಒಳ್ಳೇ ಲಾಭವಾಗುವದು. ಮುಸಲ್ಮಾನರಾದ ಹಿಂದೀಯರಾದರೂ ಮುಸಲ್ಮಾನ ಮತದ ಪಕ್ಷ ಕಟ್ಟಿಯೇ ತಮ್ಮ ಸೇಡು ತೀರಿಸಿಕೊಳ್ಳಬೇಕಾಗುವದು. ಇಬ್ಭಾಗವಾದ

ಜನಾಂಗವನ್ನು ನಡೆಬಡೆಯಲು ಮುಂದೆ ನಮಗೊಳ್ಳೇ ಅನುಕೂಲವಾಗುವದು. ಇವೆಲ್ಲವನ್ನು ಅಪ್ರಬುದ್ಧಳಾದ ನಿನಗೆ ಹೇಗೆ ತಿಳಿಯಬೇಕು?"

"ಅಪ್ಪಾ, ಇದೊಳ್ಳೇ ರಾಜಕಾರಣವು. ಅಚ್ಚ ಹಿಂದೂರಕ್ತದವನು ನೀವಂದಂತೆ ಎಂದಿಗೂ ಸಜಾತಿಯ ಮೇಲೆ ತಿರುಗಿ ನಿಲ್ಲಲಾರನು. ಹಿಂದೂ ಜನಾಂಗವು ಧರ್ಮಾಂತರ ಹೊಂದಿದ ಜನತೆಯನ್ನು ಪುನಃ ತನ್ನ ಜನಾಂಗದಲ್ಲಿ ತೆಗೆದುಕೊಳ್ಳುವ ದಿಲ್ಲವೆಂಬುದೇನೋ ಸುಳ್ಳಲ್ಲ; ಆದರೆ ಅಪ್ಪಾ, ಹಿಂದುಗಳನ್ನು ಮುಸಲರನ್ನಾಗಿ ಮಾಡಿದರೆ, ಅವರು ಬಾದಶಾಹೀ ಸಿಂಹಾಸನದ ಪಕ್ಷ ಕಟ್ಟಿ ತಾಯ್ನಾಡಿಗೆ ವಿರುದ್ಧವಾಗಿ ನಡೆಯುವರೆಂಬ ನಿಮ್ಮ ಕಲ್ಪನೆಯನ್ನು ಕೇಳಿ ನನಗೆ ಪರಮಾವಧಿ ಆಶ್ಚರ್ಯವಾಗಿದೆ. ಅಕ್ಬರ ತಾತಂದಿರು ಇಂಥ ರಾಜಕಾರಣ ನೀತಿಯನ್ನು ಯಾವ ಕಾಲದಲ್ಲಿಯೂ ಪ್ರಯೋಗಿಸಿದವರಲ್ಲ. ಅವರು ನಿಮ್ಮ ಹಾಗೆ ಧರ್ಮಾಂಧರಾಗಿ ಜಾತಿಗೆಡಿಸುವ ಸಾಹಸಕ್ಕೆ ಕೈ ಹಚ್ಚಿದ್ದಿದ್ದರೆ, ಅವರ ರಾಜ್ಯವು ಆಗಲೆ ನಾಮಶೇಷವಾಗುತ್ತಿತ್ತು."

ಮಗಳ ಈ ಮಾತಿನಿಂದ ಬಾದಶಹನು ಬಹಳವಾಗಿ ಸಿಟ್ಟಿಗೆದ್ದನು. ಆದರೂ ಅವನು ಸಮಾಧಾನದ ಸೋಗಿನಿಂದ: "ಬದ್ರುನ್ನಿಸೆ, ಅಕ್ಬರನೇನು ಹಿಂದೂಗಳನ್ನು ಜಾತಿಗೆಡಿಸಲಿಲ್ಲವೆಂದು ತಿಳಿದಿರುವೆಯೇನು? ಅನೇಕ ರಾಜ-ಮಹಾರಾಜರುಗಳೆಲ್ಲರೂ ಆತನ ಕಾಲದಲ್ಲಿ ಮುಸಲ್ಮಾನ ಧರ್ಮವನ್ನು ಸ್ವೀಕರಿಸಿದ್ದರು."

ಬದ್ರುನ್ನಿಸೆಯು ನಡುವೇ ಬಾಯಿಹಾಕಿ: "ಇಷ್ಟೇ ಅಲ್ಲ; ಅವರನ್ನು ಹಿಂದುಗಳು ತಮ್ಮ ಸಂಬಂಧಿಕರನ್ನಾಗಿಯೂ ಮಾಡಿಕೊಂಡಿದ್ದರು; ಆದರೆ ಅವರು ಮತ ಪ್ರಸಾರವನ್ನು ನಿಮ್ಮಂತೆ ಬಲಾತ್ಕಾರದಿಂದ ಮಾಡಲಿಲ್ಲವಲ್ಲವೆ?"

ಶಹಜಾದಿಯು ಇಷ್ಟು ಹೇಳುವವೇಳೆಗೆ ಒಬ್ಬ ಸರದಾರನು ಅರಮನೆಯನ್ನು ಪ್ರವೇಶಿಸಿದನು. ಆತನ ಹಿಂದೆಯೇ ಮುಖ್ಯ ವಜೀರನೂ, ಶಹಜಾದಾ ಮುಅಜಮನೂ ನಡೆದಿದ್ದರು. ಸರದಾರನು ಬಾದಶಹನಿಗೆ ಬಹು ವಿನಯದಿಂದ ಮುಜರೆ ಮಾಡಿ ಆತನ ಕೈಯಲ್ಲಿ ಒಂದು ಮಡಿಕೆಯ ಪತ್ರವನ್ನಿಟ್ಟನು. ಬಾದಶಹನು ಆ ಪತ್ರವನ್ನು ತೆಗೆದುಕೊಂಡು, ಎಡಗೈಯಿಂದ ಅದರ ಒಂದು ತುದಿಯನ್ನು ಹಿಡಿದು ತನ್ನ ಮುಖಕ್ಕೆ ಅಡ್ಡಲಾಗಿ ಹಿಡಿದು ನೋಡಿದನು. ತರುವಾಯ ಅದನ್ನು ವಜೀರನ ಕೈಯಲ್ಲಿಟ್ಟು ಓದುವಂತೆ ಸೂಚಿಸಿದನು. ವಜೀರನು ಪತ್ರವನ್ನು ಬಿಚ್ಚಿ ನೋಡಿದನು. ತರುವಾಯ ಓಲೆಯನ್ನು ಹಾಗೆಯೇ ಮಡಚಿ ಬಾದಶಹನ ಕಡೆಗೆ ಕೊಟ್ಟು ಏನೋ ಹೇಳಬೇಕೆನ್ನುವಷ್ಟರಲ್ಲಿಯೇ ಬಾದಶಹನು:—"ಪತ್ರದ ಲೇಖಕನು ಓಲೆಯನ್ನು ಸರಿಯಾಗಿ ಮಡಚಿರಲಿಲ್ಲವೆಂಬಂತೆ ತೋರುತ್ತದೆ. ಅಂತೆಯೆ ನಿಮಗೆ ಮತ್ತೆ ಮಡಿಚಿಕೊಡುವ ಶ್ರಮವಾಯಿತು."

"ಹುಜೂರ, ಕ್ಷಮಿಸಿರಿ. ಪತ್ರವು ಅಚ್ಚ ಅರಬ್ಬೀ ಭಾಷೆಯಲ್ಲಿ ಬರೆದಿದ್ದು ನನಗೆ ಆ ಭಾಷೆಯು ಅವಗತವಿರದ್ದರಿಂದ ಪತ್ರವನ್ನು ಹಿಂದಕ್ಕೆ ಕೊಡಬೇಕಾಯಿತು." ಬಾದಶಹನ ವ್ಯಂಗ್ಯಮಾತಿಗೆ ಮಂತ್ರಿಯು ಸವಿನಯದಿಂದ ಹೀಗೆ ನುಡಿಯುತ್ತಿರ

ಲಿಕ್ಕೆ ಖಾನನನ್ನು ಹೊತ್ತುಕೊಂಡು ಬಂದಿರುವರೆಂದು ದೂತನ ಮುಖದಿಂದ ತಿಳಿಯಿತು. ಕೂಡಲೆ ಬಾದಶಹನು ಖಾನನನ್ನು ಕಾಣುವದಕ್ಕಾಗಿ ಹೊರಗಿನ ಚಾವಡಿಗೆ ಬಂದನು.''

ಶಿಪಾಯಿಗಳು ಮೇಣೆಯನ್ನು ತಂದು ಚಾವಡಿಯಲ್ಲಿರಿಸಿ, ಖಾನನ ವಿಷಾದಾಂತ ಸ್ಥಿತಿಯನ್ನು ಬಾದಶಹನೊಡನೆ ಬಿನ್ನವಿಸಿಕೊಂಡರು. ಬಾದಶಹನು ಶಿಪಾಯಿಗಳ ಮಾತನ್ನು ಕೇಳುವ ಲಕ್ಷ್ಯವನ್ನು ಬಿಟ್ಟುಕೊಟ್ಟು ಮೇಣೆಯ ಮುಸುಕನ್ನು ತೆಗೆದನು. ಕೂಡಲೆ ಖಾನನು ಬಾದಶಹನಿಗೆ ಕುರ್ನಿಸಾತ ಮಾಡುವದಕ್ಕಾಗಿ ಬಹಳ ಕಷ್ಟದಿಂದ ಏಳತೊಡಗಿದನು. ಖಾನನ ಈ ವಿಧವಾದ ದುರವಸ್ಥೆಯನ್ನು ನೋಡಿ, ಬಾದಶಹನು ವಿಸ್ಮಯಗೊಂಡನು. ಅವನು ಖಾನನನ್ನು ಕುರಿತು: ''ಸೇನಾಪತೀ, ಯುದ್ಧದಲ್ಲಿ ಏಟು ತಿಂದು ಬಂದು, ಇಲ್ಲಿ ಏಳುವ ಪ್ರಯತ್ನವನ್ನೇಕೆ ಮಾಡುತ್ತಿ. ಬಿದ್ದಲ್ಲಿಂದಲೇ ನಡೆದ ಸಂಗತಿ ಎಲ್ಲವನ್ನೂ ಒದರು.''

ಖಾನನು ರಣಕ್ಷೇತ್ರದಲ್ಲಿ ನಡೆದ ಸಂಗತಿಯೆಲ್ಲವನ್ನೂ ಹೇಳಿದನು. ಖಾನನ ಪರಾಭವಕ್ಕೆ ಕಾರಣಕರ್ತರಾದ ವಿಜಾಪುರದ ಸುಲ್ತಾನನ ಹಾಗು ಜಹಗೀರದಾರನಾದ ಸಾತನಾಮಿಯ ಅವ್ಯಕ್ತ ಚಿತ್ರವನ್ನು ಅವನು ಸಿಟ್ಟಿನಿಂದ ನೋಡಹತ್ತಿದನು. ಅವರ ಸೊಕ್ಕನ್ನು ಶೀಘ್ರದಲ್ಲಿಯೇ ಮುರಿಯಬೇಕೆಂದು ಆಲೋಚಿಸುತ್ತಿರುವಷ್ಟರಲ್ಲಿಯೇ, ಇಬ್ಬರು ಸವಾರರು ಓಡುತ್ತ ಬಂದು ಶೂರ ಸಾತನಾಮಿಯು ರಣಾಂಗಣದಿಂದ ತೆರಳಿದನೆಂದೂ, ದೇವಾಲಯವನ್ನು ಉಧ್ವಸ್ಥಗೊಳಿಸುವ ಕಾರ್ಯವು ಸಫಲವಾಯಿತೆಂದೂ ವಿನಂತಿಸಿಕೊಂಡರು. ಮುಂದೆ ಸ್ವಲ್ಪವೇಳೆಯಲ್ಲಿಯೇ ಆ ಸಾತನಾಮಿಯು ಬಾದಶಹನನ್ನು ಕಾಣುವದಕ್ಕಾಗಿ ಬರುತ್ತಿರುವನೆಂದು ಮತ್ತೊಬ್ಬ ದೂತನು ಸುದ್ದಿ ತಂದನು. ಬಾದಶಹನು ಸ್ಮಿತವದನನಾಗಿ ದೂತರ ಅರಿಕೆಗಳನ್ನು ಮನನ ಮಾಡುತ್ತ ಕುಳಿತಿದ್ದನು. ಅಷ್ಟರಲ್ಲಿಯೇ ನಾರಾಯಣದೇವನು ಚಾವಡಿಯನ್ನು ಹೊಕ್ಕು ಬಾದಶಹನಿಗೆ ವಂದಿಸಿದನು. ನಾರಾಯಣದೇವನಂಥ ಬಲಾಢ್ಯ ವ್ಯಕ್ತಿಯು ಯುದ್ಧರಂಗವನ್ನು ಬಿಟ್ಟು, ತನ್ನೆಡೆಗೆ ಬಂದಿರಬೇಕಾದರೆ, ಯಾವದೋ ಮಹತ್ವದ ಪ್ರಸಂಗವಿರಬೇಕೆಂದು ಚಾಣಾಕ್ಷನಾದ ಔರಂಗಜೇಬನಿಗೆ ಹೊಳೆಯದಿರಲಿಲ್ಲ. ಕೂಡಲೆ ನಿಜಸ್ಥಿತಿಯನ್ನು ಬೈಲಿಗೆಳೆಯುವದಕ್ಕಾಗಿ ''ನಾರಾಯಣದೇವ, ಜಹಗೀರಿಯ ಯಾವ ನ್ಯೂನತೆಯನ್ನು ಹೋಗಲಾಡಿಸುವದಕ್ಕಾಗಿ ನೀವು ಬಾದಶಹನವರೆಗೂ ಬಂದಿರುತ್ತಿರಿ? ರಾಜಕಾರಣದಲ್ಲಿ ಏನಾದರೂ ವ್ಯತ್ಯಾಸವುಂಟಾಗಿರುವದೇನು?''

ನಾರಾಯಣದೇವನು ಬಾದಶಹನಿಗೆ ತನ್ನ ಸವಿಸ್ತರ ವೃತ್ತಾಂತವನ್ನೂ ತಿಳಿಸಿ ಪೂರ್ವ ಪ್ರತಿಜ್ಞೆಯ ಸಿಂಹಾವಲೋಕನ ಮಾಡಿದನು.



# ಸಾಲಿಮುಲ್ಲನ ಹಸ್ತಲಿಖಿತ ಪತ್ರಿಕೆಯು.

"ಹೃದಯೇಶ್ವರಾ, ಏನು? ಆ ಪತ್ರವನ್ನು ಅಷ್ಟು ಕೃಪಾದೃಷ್ಟಿಯಿಂದ ನೋಡೋಣವಾಗುತ್ತದೆ."

ಸಾಯಂಕಾಲದ ವೇಳೆಯಾಗಿತ್ತು. ಆಲಂಗೀರನು ರಂಗಮಹಲಿನ ಹೊರಭಾಗದ ಆವರಣದಲ್ಲಿ ಕುಳಿತಿದ್ದನು. ಹಿಂದಿನ ದಿನ ಬಂದ ಪತ್ರದ ಅವಲೋಕನದಲ್ಲಿ ಆತನ ಮನಸ್ಸು ಲೀನವಾಗಿತ್ತು. ಅಚ್ಚ ಅರಬ್ಬೀ ಭಾಷೆಯಲ್ಲಿ ಬರೆದ ಆ ಪತ್ರವನ್ನು ಅವನು ಸುಮಾರು ಕಾಲು ಗಂಟೆಯ ವರೆಗೆ ನಿರೀಕ್ಷಿಸಿದನು. ಮೊದಲೇ ಕಷ್ಟತಮವಾದ ಅರಬ್ಬೀ ಭಾಷೆಯು ರಹಸ್ಯವಿಷಯದ ಜೋಡಣೆಯಿಂದ ಮತ್ತಿಷ್ಟುನಿಗೂಢವೂ ಕಠಿಣವೂ ಆಗಿದ್ದಿತು. ಒಂದೊಂದು ವಾಕ್ಯಗಳನ್ನೂ ಪುನಃ ಪುನಃ ನೋಡಿ ಅರ್ಥ ಮಾಡಿಕೊಳ್ಳಬೇಕಾಗಿದ್ದಿತು. ಸುಮಾರು ಅರ್ಧ ಮಡಿಕೆಯುವರೆಗೆ ಪತ್ರವನ್ನುನಿರೀಕ್ಷಿಸಿದ ಬಳಿಕ: "ಆಯಿತು. ನಿನ್ನ ತಪ್ಪನ್ನು ಮುಚ್ಚಲು ಸಾಕಾದಷ್ಟು ಕಾರಣಗಳನ್ನು ತೋರಿಸಿದ್ದಾಯಿತು. ಇನ್ನು ಮುಂದಿನ ವಿಷಯವನ್ನು ನೋಡಿಯೇ ಪತ್ರದ ಸತ್ಕಾರ ಮಾಡುವೆನು."

ಬಾದಶಹನ ದೃಷ್ಟಿಯು ಪುನಃ ಪತ್ರದ ಕಡೆಗೆ ಹೊರಳಿತು. ಓಲೆಯು ಒಳ್ಳೇ ಸುರಸವಾದ ಶೈಲಿಯಲ್ಲಿ ಬರೆಯಲ್ಪಟ್ಟಿದ್ದುದರಿಂದ ಬಾದಶಹನು ಯಾವ ವಿಧವಾದ ಸತ್ಕಾರವನ್ನು ಅದಕ್ಕೆ ಕೊಡಬೇಕೆಂದಿದ್ದನೋ, ಆ ಸತ್ಕಾರವನ್ನು ಹೊಂದಲಿಕ್ಕೆ ಅದು ಸಿದ್ಧವಾಗಿದ್ದಿಲ್ಲ. ಪತ್ರದಲ್ಲಿ ಆತನ ಮನಸ್ಸು ನಿಮಗ್ನವಾಗಿದ್ದುದರಿಂದ ಉದೇಪುರಿಯಾಡಿದ ಮಾತಿನ ಕಡೆಗೆ ಅವನ ಲಕ್ಷ್ಯವಿದ್ದಿಲ್ಲ. ತನ್ನ ಪತಿಯ ಲಕ್ಷ್ಯವು ಮತ್ತೆ ಓಲೆಯ ಕಡೆಗೆ ಹೊರಳಿದ್ದನ್ನು ನೋಡಿ, ಉದೇಪುರಿಯು ತೀರ ಬಾದಶಹನ ಹತ್ತಿರಕ್ಕೆ ಬಂದು:—"ಶಾಹೇನಶಹ, ಪತ್ರದ ಗಮನಾರ್ಹವಾದ ವಿಷಯವನ್ನು ತಿಳಿಯಲು ಈ ದಾಸಿಗೂ ಅಧಿಕಾರವುಂಟಲ್ಲವೆ?" ಎಂಳು.

ಬಾದಶಹನ ದೃಷ್ಟಿಯು ಈಗ ಮಾತ್ರ ಉದೇಪುರಿಯ ಕಡೆಗೆ ತಿರುಗಿತು. ಉದೇಪುರಿಯನ್ನು ನೋಡಿದೊಡನೆಯೇ ಅವನ ಆನಂದಕ್ಕೆ ಮೇರೆಯಿಲ್ಲವಾಯಿತು. ಆಲಂಗೀರಬಾದಶಹನಿಗೆ ಅನೇಕ ಜನ ಹೆಂಡಂದಿರಿದ್ದು ಅವರಲ್ಲೆಲ್ಲಾ ಉದೇಪುರಿಯು ಒಳ್ಳೇ ಚಲುವೆಯಾಗಿದ್ದಳು. ಉದೇಪುರಿಯಲ್ಲಿ ಬಾದಶಹನ ಪ್ರೇಮವಿದ್ದಷ್ಟು ಮತ್ತಾರಲ್ಲಿಯೂ ಇರಲಿಲ್ಲವೆಂದು ಹೇಳಬಹುದು. ಅವನು ಉದೇಪುರಿಯ ಸಂಪಾದನೆಗಾಗಿ ಸ್ವತಃ ತನ್ನ ಅಣ್ಣನಾದ ದಾರಾಶುಕೋವನ್ನು ಆಗ್ರಾದ ಸಮೀಪದ ಸಾಮುಗಡ ಎಂಬಲ್ಲಿ ಪರಾಭವಗೊಳಿಸಿದ್ದನು. ತನ್ನ ಮೊದಲಿನ ಗಂಡನಾದ ದಾರಾಶುಕೋವು ಪರಾಜಿತನಾದ್ದರಿಂದ ಅವಳು ಆಲಂಗೀರನ ಜನಾನಿಗೆ ಗುರಿಯಾಗಿದ್ದಳು.

ಉದೇಪುರಿಯು ಹೀಗೆ ಆಕಲ್ಪಿತವಾಗಿ ಜನಾನಖಾನೆಯಿಂದ ಹೊರಗೆ ಬಂದು ದರ್ಶಿಸಿದ ಬಾದಶಹನಿಗೆ ಅತ್ಯಾಶ್ಚರ್ಯವಾಯಿತು; ಏಕೆಂದರೆ, ಬಾದಶಾಹೀ ಅಂತಃ

ಪುರದಲ್ಲಿ ಸ್ವತಃ ಪಟ್ಟಮಹಿಷಿಗಾದರೂ ಒಳ-ಹೊರಗೆ ಸ್ವೇಚ್ಛೆಯಾಗಿ ತಿರುಗುವದಕ್ಕೆ ಸಂಪೂರ್ಣ ನಿರ್ಬಂಧವಿದ್ದಿತು. ರಂಗಮಹಲಿನ ಇರಾಣೀ ಕಾವಲುಗಾರಳು ಕುತಾರ ಹಸ್ತಳಾಗಿ ಕಣ್ಣಲ್ಲಿ ಎಣ್ಣೆಹಾಕಿಕೊಂಡು ಅಂತಃಪುರವನ್ನು ಕಾಯುತ್ತಿದ್ದಳು.

ಬಾದಶಹನು ಉದೇಪುರಿಯ ಕಡೆಗೆ ನೋಡುತ್ತ "ಉದೇಪುರಿ! ಇಲ್ಲಿಗೆ ಬರಲಿಕ್ಕೆ ನಿನಗೆ ಯಾರೂ ಆತಂಕವನ್ನು ಮಾಡಲಿಲ್ಲವೆ?"

"ದಿಲ್ಲೀಶ್ವರನ ಕೃಪಾಕಟಾಕ್ಷಕ್ಕೆ ಪಾತ್ರಳಾದ ಈ ಉದೇಪುರಿಯನ್ನು ತಡೆಯುವ ಧೈರ್ಯವು ಭಾರತವರ್ಷದಲ್ಲಿ ಅದಾವ ಎದೆಗಾರನಿಗಿರುವದು?"

ಉದೇಪುರಿಯು ಹೆಮ್ಮೆಯಿಂದಲೂ ಅಭಿಮಾನದಿಂದಲೂ ಮಾತನಾಡಿದಳು. ತನ್ನ ಪತ್ನಿಯು ತನ್ನನ್ನು ಶ್ಲಾಘಿಸಿದ್ದರಿಂದ ದಿಲ್ಲೀಶ್ವರನು ಒಳಿತಾಗಿ ಆನಂದಪಟ್ಟನು. ಅವನು ಉದೇಪುರಿಯನ್ನು ಕುರಿತು:—"ಅಹುದು. ಪ್ರಿಯೇ, ನೀನನ್ನುವ ಮಾತು ಅಕ್ಷರಶಃ ನಿಜವಿರುವದು. ಬಾದಶಹನ ದೃಷ್ಟಿಗೆ ಬಿದ್ದ ಒಬ್ಬ ಯಃಕಶ್ಚಿತ್ತ ಬೀದಿಯ ಭಿಕಾರಿಯನ್ನು ತಡೆಯುವ ಧೈರ್ಯವು ಯಾರಿಗೂ ಇಲ್ಲದಿರುವಾಗ ನನ್ನ ಕೃಪೆಗೆ ಪಾತ್ರಳಾದ-ಪ್ರತ್ಯಕ್ಷ ಭಾರತಸಮ್ರಾಟನ ಕೃಪೆಗೆ-ಪಾತ್ರಳಾದ-ನಿನ್ನನ್ನು ತಡೆಯುವ ಧೈರ್ಯವು-ತಡೆಯುವ ಧೈರ್ಯವಿಷ್ಟೇ ಅಲ್ಲ, ಭಾರತೇಶನ ಕೃಪೆಗೆ ಪಾತ್ರಳಾದ ನಿನ್ನೆದುರಿನಲ್ಲಿ ನೆಟ್ಟಗೆ ತಿರುಗಾಡುವ ಧೈರ್ಯವು-ಸ್ವತಃ ವಜೀರನಿಂದಲೂ ಆಗಲಿಕ್ಕಿಲ್ಲ." ಬಾದಶಹನು ಹೀಗೆ ನುಡಿದು:-"ಪ್ರಿಯೇ, ನಾನು ಯಾರನ್ನೂ ಹೊರಗೆ ಬಿಡಲಾಗದೆಂದು ರಂಗಮಹಲಿನ ಇರಾಣೀ ಕಾವಲುಗಾರಳಿಗೆ ತಿಳಿಸಿರಲು, ಅವಳು ನಿನ್ನನ್ನು ನಿರಾತಂಕವಾಗಿ ಬಿಟ್ಟುಬಿಟ್ಟಳೇನು?"

"ಹಾಗೆ ಬಿಟ್ಟಿದ್ದರಿಂದಲೇ ನನಗೆ ಇಲ್ಲಿಗೆ ಬರುವ ಅಮೃತಸಂಧಿಯು ದೊರಕಿತು." ಎಂದು ಉದೇಪುರಿಯು ನುಡಿದು: "ಒಬ್ಬ ಯಃಕಶ್ಚಿತ ಇರಾಣೀ ಕಾವಲುಗಾರಳು ನಿಮ್ಮ ಆಜ್ಞೆಯನ್ನು ಅವಜ್ಞೆ ಮಾಡುವಳೆಂದ ಬಳಿಕ ಭಾರತೇಶರ ಆಜ್ಞೋಲ್ಲಂಘನ ಮಾಡುವ ವೀರರನ್ನು ಹುಡುಕುವದಕ್ಕೆ ದೂರ ಹೋಗಬೇಕೇಕೆ?"

"ತೋಬಾ! ತೋಬಾ!! ಆ ಇರಾಣೀ ಹೆಂಗಸು ನನ್ನ ಮಾತನ್ನು ಅಮಾನ್ಯ ಮಾಡಿದಳೆ? ತಾಳು, ಅವಳನ್ನು ಈಗಲೇ ಆನೆಯ ಕಾಲಿಗೆ ಕಟ್ಟಿ ತುಳಿಸುವೆನು."

"ಖುದಾವಂದ, ತಾಳ್ಮೆಯಿರಲಿ. ಅಂದಿನ ದಿನ ನನ್ನ ಇಷ್ಟದಂತೆ ಎಲ್ಲಿ ಬೇಕೆಂದರೆ ಅಲ್ಲಿ ತಿರುಗಾಡಲಿಕ್ಕೆ ಸಂಪೂರ್ಣ ಅನಿರ್ಬಂಧವಿರಬೇಕೆಂದು ತಾವು ಆ ಇರಾಣೀ ಹೆಂಗಸಿಗೆ ತಿಳಿಸಿದ್ದಿಲ್ಲವೇನು? ಇದರಿಂದ ಆನೆಯ ಕಾಲಿಗೆ ಕಟ್ಟಿ ತುಳಿಸಿ ಕೊಳ್ಳುವಂತಹ ಅಪರಾಧವನ್ನು ಅವಳೇನು ಮಾಡಿದ ಹಾಗಾಯಿತು?"

"ಅಹುದು; ಅಂದಿನ ನಿನ್ನ ಹಟಮಾರಿತನಕ್ಕಾಗಿ ನಾನು ಹಾಗೆ ಹೇಳಬೇಕಾಯಿತು; ಆದರೆ ಅದು ನಿನ್ನ ತೃಪ್ತಿಗಾಗಿ ಹೇಳಿದ ತೋರಗಾಣಿಕೆಯ ಆಜ್ಞೆಯೆಂಬುದನ್ನು ನನ್ನ ಮುಖಭಾವದಿಂದ ಆ ಸೇವಕಳು ತಿಳಿದುಕೊಳ್ಳಬೇಕಾಗಿದ್ದಿತು."

"ನಿಮ್ಮ ಮುಖಭಾವದಿಂದ ಆಜ್ಞೆಯ ನಿಜತ್ವವನ್ನು ತಿಳಿದುಕೊಳ್ಳುವಷ್ಟು

ಚತುರತೆಯು ಅವಳಲ್ಲಿದ್ದಿದ್ದರೆ ಅವಳು ಸೇವಾವೃತ್ತಿಯಲ್ಲೇಕಿರುತ್ತಿದ್ದಳು?" ಉದೇಪುರಿಯು ಆಲಂಗೀರನ ಭುಜದ ಮೇಲೆ ತನ್ನ ಕೋಮಲ ಕರಗಳನ್ನಿಟ್ಟು:—
"ನೋಡಿರಿ, ನಿಮ್ಮ ಸುಳ್ಳು ಆಜ್ಞೆಯನ್ನು ಸೇವಕಳು ನಿಜವೆಂದು ಭಾವಿಸಬೇಕು; ನನ್ನ ದಾರಿಯು ನಿರಾಪದವಾಗಬೇಕು; ನಾನು ಈ ರಹಸ್ಯಪತ್ರವನ್ನು ತೋರಿಸುವಂತೆ ಬಾದಶಹರೊಡನೆ ಛಲಿಸಬೇಕು; ಅನಂತರ ಬಾದಶಹರು ತೋರಿಸಬೇಕು; ತರುವಾಯ ನಾನು ಅವರಿಗೆ ಸನ್ಮಾನಪೂರ್ವಕವಾಗಿ ವಂದಿಸಬೇಕು. ಇವೆಲ್ಲ ಎಂಥ ಘಟನೆಗಳು? ಹೀಗೆ ಸಂಬಂಧಿಸಿದ ಸಂಗತಿಗೇ ಅಲ್ಲಾನ ಕೃಪೆಯೆನ್ನುವದು."

"ಅಲ್ಲಾನ ಕೃಪೆಯು ಇಷ್ಟೇಸರಿ ಎಂದು ತಿಳಿದಿರುವೆಯೇನು? ಅಲ್ಲ-ಅಲ್ಲ. ಇನ್ನೂ ಇರುವದು. ಉದೇಪುರಿಯು ತನ್ನ ನೀಳವಾದ ಬಾಹುವಿನಿಂದ ಆಲಂಗೀರನನ್ನು ಆಲಂಗಿಸಬೇಕು; ಬಾದಶಹನು ಉದೇಪುರಿಯು ಗಲ್ಲವನ್ನು ಹಿಡಿದು ಮುದ್ದಿಸಬೇಕು; ಅನಂತರ ಉದೇಪುರಿಯು............"

"ಇದ್ದೀತು, ಅಲ್ಲಾನ ಕೃಪೆಯು ಹೀಗೆಯೂ ಇದ್ದೀತು; ಆದರೆ ನಾನು ಮೊದಲು ಹೇಳಿದ ರೀತಿಯಲ್ಲಿ ಅಲ್ಲಾನ ಕೃಪೆಯಿರುವದಾದರೆ, ನೀವು ಹೇಳಿದ್ದನ್ನೂ ಸತ್ಯವೆಂದು ಭಾವಿಸಲಿಕ್ಕೆ ಅಡ್ಡಿಯಿಲ್ಲ. ನನ್ನ ಮಾತಿಗೆ ವ್ಯತ್ಯಯಬಂದರೆ, ನೀವು ಅಂದದ್ದನ್ನು ಸತ್ಯವೆಂದು ಹೇಗೆ ಭಾವಿಸಲಿಕ್ಕೆ ಬರುವದು?" ಉದೇಪುರಿಯು ಮಾತುಗಳನ್ನು ಕೇಳಿ ಬಾದಶಹನಿಗೆ ಸ್ವರ್ಗಸುಖ ಲಭ್ಯವಾದಂತಾಯಿತು. ಆಗ ಅವನು:-
"ಆಗಲಿ. ಪ್ಯಾರಿ, ಓಲೆಯ ಅಭಿಪ್ರಾಯವನ್ನು ಕೇಳು." ಎಂದು ನುಡಿದು, ಓಲೆಯನ್ನು ಓದುತ್ತ-ಓದುತ್ತ ಅದರ ಅಭಿಪ್ರಾಯವನ್ನು ಉರ್ದು ಭಾಷೆಯಲ್ಲಿ ಹೇಳತೊಡಗಿದನು:—

"ಭಾರತೇಶಾ, ನಿನ್ನ ಮೊದಲಿನ ಭೆಟ್ಟಿಯ ನಂತರ ಈಗ ನಿನಗೆ ಮತ್ತೆ ಪತ್ರ ಬರೆಯುವ ಸುಯೋಗವು ಒದಗಿರುವದು. ಈ ಪತ್ರವನ್ನು ಅರಬ್ಬೀಭಾಷೆಯಲ್ಲಿ ಬೇಕಂತಲೇ ಉಪಯೋಗಿಸಿರುತ್ತೇನೆ. ಅರಬ್ಬಿಭಾಷೆಯ ಉಪಯೋಗವನ್ನು ಈ ಪತ್ರವಾಚನದ ಮೂಲಕ ಪಡೆಯಬೇಕೆಂದು ಅಪೇಕ್ಷಿಸುತ್ತೇನೆ.

ನನ್ನನ್ನು ಅಷ್ಟೈಶ್ವರ್ಯವಂತನನ್ನಾಗಿ ನನ್ನ ಶಿಷ್ಯನು ಮಾಡುವನೆಂದು ಭ್ರಮಿಸಿ ನಿನ್ನ ಆಸ್ಥಾನಕ್ಕೆ ಬಂದೆನು. ನೀನು ನನ್ನನ್ನು ಸಂಪತ್ಸಮೃದ್ಧನನ್ನಾಗಿ ಮಾಡುವ ಮಾತು ಹಾಗಿರಲಿ; ಯುಕ್ತಾಯುಕ್ತ ವಿವೇಚನೆಯಿಲ್ಲದೆ ನನ್ನ ಗೌರವವು ಆಸ್ಥಾನದಲ್ಲಿ ಒಂದಿಷ್ಟೂ ಉಳಿಯದಂತೆ ಮಾತನಾಡಿ ನಿನ್ನ ಕಠೋರವೃತ್ತಿಯನ್ನು ಬಿತ್ತರಿಸಿಬಿಟ್ಟೆ. ನಿನಗೆ ಅರಬ್ಬಿಭಾಷೆಯನ್ನು ಕಲಿಸಿ, ನಿನ್ನ ಕಾಲಹರಣವನ್ನು ಮಾಡಿದೆನೆಂದು ಸರ್ವಥಾ ಭಾವಿಸಬೇಡ. ಶಿಷ್ಯನ ಒಂದು ಕ್ಷಣಕಾಲವನ್ನೂ ಸಹ ದುರುಪಯೋಗಪಡಿಸಬಾರದೆಂಬ ತತ್ವವನ್ನು ಗಮನದಲ್ಲಿಟ್ಟೇ ನಿನಗೆ ಶಿಕ್ಷಣ ಕೊಟ್ಟಿರುವೆನು. ನಿನ್ನ ಅಪ್ಪನಾದ ಶಹಾನಶಹನು ನನ್ನನ್ನು ಕೆಲಸಕ್ಕೆ ಬಾರದವನೆಂದು ತಿಳಿದು ಗುರುಸ್ಥಾನದಲ್ಲಿ ನೇಮಿಸಲಿಲ್ಲವೆಂಬ ಸಂಗತಿಯನ್ನು ನೀನು ತಿಳಿದಿರ

ಬೇಕಾಗಿದ್ದಿತು. ಆತನೊಡನೆ ಮಂತ್ರಣಾಗಾರದಲ್ಲಿ ನಾವಿಬ್ಬರೇ ಕುಳಿತು ರಾಜ ಕಾರಣ ವಿಷಯದ ಚರ್ಚೆಯನ್ನು ನಡೆಸಿದ ಹಲವು ಸಂದರ್ಭಗಳು ಈಗಲೂ ನನ್ನ ಸ್ಮರಣದಲ್ಲುಳಿದಿರುವವು. ಹುಗ್ಲಿತೀರದ ಪೋರ್ತುಗೀಸ ರಾಜ್ಯವನ್ನು ಕೈವಶ ಮಾಡಿಕೊಳ್ಳಬೇಕಾದರೆ, ನಾನು ಕೊಟ್ಟ ಉತ್ತಮ ಸಲಹೆಯನ್ನು ನೋಡಿ ಸ್ವತಃ ನಿನ್ನ ತಂದೆಯು ನನ್ನ ರಾಜಕಾರಣ ವಿಚಕ್ಷಣತೆಯನ್ನು ಬಹುವಾಗಿ ಪ್ರಶಂಸಿಸಿದ್ದ ನೆಂದು ಹೇಳಿದರೆ ಆದರ ಪರಿಣಾಮವು ನಿನ್ನ ತಲೆಯಲ್ಲಿ 'ಸುಳ್ಳು, ತೀರ ಸುಳ್ಳು' ಎಂಬ ಶಬ್ದದಿಂದ ಪ್ರತಿಧ್ವನಿಗೊಳ್ಳದಿರಲಾರದು. ನಿನಗಾದರೂ ರಾಜಕಾರಣದ ವಿಷಯವನ್ನು ಗುಪ್ತವಾಗಿ ತಿಳಿಸುವ ಸಲುವಾಗಿಯೇ ಅರಬ್ಬಿಭಾಷೆಯಂತಹ ಮಹ ತ್ವವೂ ರಹಸ್ಯಪೂರಿತವೂ ಆದ ಭಾಷೆಯ ಅಧ್ಯಯನ ಮಾಡಿಸಿದೆನು. ಶಿಷ್ಯನ ಉನ್ನತಿಯೇ ಗುರುವಿನ ಗುರಿ ಎಂಬುದನ್ನು ಧ್ಯೇಯವಾಗಿಟ್ಟುಕೊಂಡು ನಿನಗೆ ಅರಬ್ಬೀಭಾಷೆಯನ್ನು ಕಲಿಸಿದೆನಲ್ಲದೆ, ನಿನ್ನ ಕಾಲವನ್ನು ವೃಥಾಕಳೆಯಬೇಕೆಂಬ ವಾಂಛಿತವು ಸ್ವಲ್ಪವೂ ಇರಲಿಲ್ಲವೆಂಬುದನ್ನು ಸ್ಪಷ್ಟವಾಗಿ ತಿಳಿಸುವೆನು. ಅರಬ್ಬಿ ಭಾಷೆಯು ಕಠಿಣತರವಾದದ್ದಿದ್ದು, ವಯಸ್ಸಾದನಂತರ ಕಲಿಯಲೂ, ಕಲಿಸಲೂ ಉಳಿದ ಭಾಷೆಯಂತೆ ಸುಲಭವಲ್ಲವೆಂಬುದನ್ನು ನೀನೇನು ಅರಿಯದವನಲ್ಲ. ಭಾರತ ಸಾಮ್ರಾಟ್, ಇದು ನಿಜವೆಂದು ತಿಳಿಯುವೆಯಾದರೆ ಕೃತಕರ್ಮಕ್ಕಾಗಿ ಪಶ್ಚಾತ್ತಾಪ ಪಡುವೆಯೆಂಬುದನ್ನೂ ಸುಳ್ಳೆಂದು ತಿಳಿದರೆ, ನನ್ನನ್ನು ಇದೇ ಈಗ ಗಲ್ಲಿಗೇರಿಸಲಿಕ್ಕೆ ಹಿಂಜರಿಯುವವನಲ್ಲವೆಂಬುದನ್ನೂ ಬಲ್ಲೆನು. ಆದರೂ ನಿನ್ನ ತಪ್ಪುತಿಳವಳಿಕೆ ಯನ್ನು ನಿರಸನಮಾಡುವದಕ್ಕಾಗಿ ಧೈರ್ಯದಿಂದಲೂ ವಿಷಾದದಿಂದಲೂ ಈ ಪತ್ರ ವನ್ನು ಬರೆದಿರುವೆನು. ನನ್ನ ಕರ್ತವ್ಯವನ್ನು ನಾನೇನೋ ಮಾಡಿದ ಹಾಗಾಯಿತು. ಇನ್ನು ಸಾಮ್ರಾಟನ ಕರ್ತವ್ಯವೇನೆಂಬುದನ್ನು ಉಲ್ಲೇಖಿಸಿ ಪತ್ರದ ಪೂರ್ಣತೆ ಯನ್ನು ಪುಷ್ಟೀಕರಿಸುವೆನು.

ದಿಲ್ಲೀಶ್ವರಾ, ರಾಜನೆಂದರೆ ಕೇವಲ ದಬ್ಬಾಳಿಕೆಯಲ್ಲಿ ನಿಮಗ್ನನಾಗಿರುವ ಸುಲಿಗೆ ಗಾರನೆಂದು ಭಾವಿಸಬೇಡ; ಪ್ರಜೆಗಳ ದುಃಖವನ್ನು ನಿವಾರಣೆ ಮಾಡುವ ಒಬ್ಬಾ ನೊಬ್ಬ ದೇವಸದೃಶನಾದ ಧಾರ್ಮಿಕ ವ್ಯಕ್ತಿಯೆಂದು ತಿಳಿ. ರಾಜನಲ್ಲಿ ಪರಮತ ಸಹಿ ಷ್ಣುತೆಯು ಅವಶ್ಯವಾಗಿ ಇರಬೇಕಾಗುವುದು. ನಿನ್ನಲ್ಲಿ ಆ ಗುಣವಿರುವುದೆ? ಪ್ರಜ ಗಳನ್ನು ಪುತ್ರವತ್ಪರಿಪಾಲನೆ ಮಾಡಬೇಕಾದ ಕರ್ತವ್ಯವು ರಾಜನದಾಗಿರುವುದು. ನಿನ್ನಲ್ಲಿ ಆ ಕರ್ತವ್ಯ ಜಾಗ್ರತೆಯ ತಿಲಾಂಶವಾದರೂ ಇರುವುದೇ? ಗುರು-ಹಿರಿಯರ, ತಂದೆ-ತಾಯಿಗಳ ಸನ್ನಿಧಿಯಲ್ಲಿ ರಾಜನಾಮವನ್ನು ಸ್ಮರಿಸಿ ಅತ್ಯಂತ ಪವಿತ್ರವಾದ ರಾಜದಂಡವನ್ನು ಧರಿಸಬೇಕಾಗಿರುವದು. ನೀನು ಹಾಗೆ ಧರಿಸಿರುವೆಯಾ? ಹುಚ್ಚು ನಾಯಿಯನ್ನು ಹೊಡೆಯುವ ಸಲುವಾಗಿ ಕೈಯಲ್ಲಿ ಹಿಡಿದ ಬಗನಿಯ ದೊಣ್ಣೆ ಯೆಂದು ಭಾವಿಸಿ, ನೀನು ರಾಜದಂಡವನ್ನು ಕೈಯಲ್ಲಿ ಹಿಡಿದಿದ್ದರೆ ಹಿಡಿದಿರಬಹುದು. ಅಂದಮೇಲೆ ನೀನು ರಾಜನು ಹೇಗಾದಿ? ನಾಟಕದ ರಾಜನಂತೆ ಆಡಂಬರದಿಂದ

ಸಿಂಹಾಸನದಲ್ಲಿ ಕುಳಿತು ಸುರಸವಾಗಿ ಮಾತನಾಡುವ ರಾಜನು ನೀನೆಂದರೆ, ಒಪ್ಪ ಬಹುದಾಗಿದೆ.

ಭಾರತನರೇಂದ್ರ! ಹಿಂದುಗಳು ಕೇಳಿ ಕೇಳಿದ ಹಾಗೆ ಹುದ್ದೆಗಳನ್ನು ಕೊಟ್ಟು, ಅವರ ಪ್ರೀತಿ ವಿಶ್ವಾಸಗಳಿಂದಲೇ ಮೊಗಲ ಸಾಮ್ರಾಜ್ಯದ ನೆಲಕಟ್ಟನ್ನು ಭದ್ರೀಕರಿಸಿದ ಅಕ್ಬರಬಾದಶಹನ ಉದಾತ್ತ ಗುಣಗಳೆಷ್ಟು! ಅದೇ ಸಂತತಿಯವನಾಗಿ ಮೊಗಲ ರಾಜ್ಯದ ನೆಲಕಟ್ಟನ್ನು ಶಿಥಿಲಗೊಳಿಸುವ ನಿನ್ನ ಗುಣಗಳೆಷ್ಟು!! ನೀನು ಬರಿಯ ಹಿಂದುಗಳ ಅವಕೃಪೆಗೆ ಮಾತ್ರ ಪಾತ್ರನಾಗಿರುವೆ ಎಂದು ತಿಳಿಯಬೇಡ; ಸಜಾತಿಯಲ್ಲಿಯೂ ನಿನ್ನ ಶತ್ರುಸಂಖೆಯು ಮಿತಿಮೀರತೊಡಗಿದೆ. ನಿನ್ನ ದೀರ್ಘವಾದ ಭಾಷಣಗಳಿಂದ ಯಾವನೂ ನಿನ್ನನ್ನು ಭಕ್ತಿಯಿಂದ ವಂದಿಸನು. ನಿನ್ನ ಪೂರ್ವಜರು ನಿನ್ನಂತೆ ಕಪಟಾಚಾರಿಗಳಾಗಿ ಜನರ ಮೆಚ್ಚುಕೆಯನ್ನು ಪಡೆದಿರಲಿಲ್ಲವೆಂಬುದನ್ನು ಸಂಪೂರ್ಣವಾಗಿ ನಂಬಿರು.

ಪೈಗಂಬರರ ಆಜ್ಞೆಯ ಸೋಗನ್ನು ಹಾಕಿ ಅಕೃತ್ಯ ಅನ್ಯಾಯುಗಳಿಗೆ ಎಡೆಗೊಟ್ಟಿರುವ ನಿನ್ನನ್ನು ಯಾರೂ ನಂಬುವರೆಂದು ಭಾವಿಸಬೇಡ. ದೊಡ್ಡ ದೊಡ್ಡ ಓಲಗವನ್ನು ನೆರೆಯಿಸಿ ವಿರಕ್ತ ಸಾಧು-ಸಂತರ ಮೇಲೂ ವಿಷಯಪಿಪಾಸೆಯ ಅಪವಾದವನ್ನು ಹೊರಿಸಿ ನೀನು ಸ್ವತಃ ಉದಾತ್ತವಿಚಾರಿಯೆಂಬುದನ್ನು ತೋರಲು ಯತ್ನಿಸತೊಡಗಿರುವೆ. ಆದರೆ....''ಬಾದಶಹನು ಅಷ್ಟಕ್ಕೆ ಓದುವದನ್ನು ನಿಲ್ಲಿಸಿ ಉದೇಪುರಿಯನ್ನು ಕುರಿತು: ''ಹೋಗು, ಉದೇಪುರಿ. ಹೋಗು. ಏನಾದರೂ ಕಸೂತಿಯ ಕೆಲಸವಿದ್ದರೆ ತೆಗೆದುಕೊಂಡು ಬಾ; ನಾನು ನೋಡುವೆನು. ಈ ಪಿಶಾಚಿಯ ಪತ್ರವನ್ನು ಓದಿದರೆ ಮನಸ್ಸು ಉದ್ವಿಗ್ನವಾಗುವುದು."

''ಯಾರ ಮನಸ್ಸು ಉದ್ವಿಗ್ನವಾಗುವದು?"

''ನಿನ್ನ ಮನಸ್ಸು''

"ಅದೇಕೆ?"

"ನಿನ್ನ ಮನಸ್ಸು ಉದ್ವಿಗ್ನವಾಗುವಂತಹ ಸಂಗತಿಯನ್ನೇ ಲೇಖಕನು ಆ ಪತ್ರದಲ್ಲಿ ಚಿತ್ರಿಸಿರುವನು."

"ಏನೂ ಚಿಂತೆಯಿಲ್ಲ. ನೀವು ಪತ್ರವನ್ನು ಓದಿರಿ. ಇದರಿಂದ ನಾನು ಸ್ವಲ್ಪವಾದರೂ ವ್ಯಥೆಗೊಳ್ಳುವದಿಲ್ಲ.''

"ನಿನ್ನ ದೂಷಣೆ ಮಾಡುವದನ್ನು ನೀನು ಸಹಿಸಿಕೊಳ್ಳುವೆಯಾ?"

"ನನ್ನ ದೂಷಣೆಯೇ ಇರಲೊಲ್ಲದೇಕೆ. ನೀವು ಪತ್ರವನ್ನು ಓದುವದಕ್ಕೆ ಹಿಂಜರಿಯಬೇಡಿರಿ." ಬಾದಶಹನು ಪುನಃ ಓದುವದಕ್ಕಾಗಿ ಓಲೆಯನ್ನು ಬಿಚ್ಚಿದನು. ಆಗ ಮತ್ತೆ ಉದೇಪುರಿಯು:-"ನಿಲ್ಲಿರಿ, ಸ್ವಲ್ಪ ನಿಲ್ಲಿರಿ. ಓಲೆಯಲ್ಲಿರುವದನ್ನು ಮರೆಮಾಜಿ ಹೇಳಿದರೆ ನಾನು ಸರ್ವಥಾ ಸಮಾಧಾನಗೊಳ್ಳಲಾರೆನು. ನೀವೆಂದಂತೆ ನನ್ನ ಮನಸ್ಸು ಉದ್ವಿಗ್ನವಾಗುವಂತಹ ವಿಷಯವನ್ನು ಹೇಳಿಯೇ ತೀರಬೇಕು.''

"ನಾನು ಪತ್ರವನ್ನು ಓದಿದರೆ ನೀನು ಅಸಮಾಧಾನಗೊಳ್ಳಲಾರೆಯಷ್ಟೆ? ಹಾಗಾದರೆ ಕೇಳು." ಎಂದು ಬಾದಶಹನು ನುಡಿದು, ಮತ್ತೆ ಓದತೊಡಗಿದನು:—

"ಆದರೆ ನಿನ್ನ ಅಣ್ಣನ ಪತ್ನಿಯನ್ನು ಎಂದು ನೀನು ಹೆಂಡತಿಯೆಂದು ತಿಳಿದೆಯೋ, ಅಂದಿನಿಂದಲೂ ನಿನ್ನಂಥ ಕಾಮುಕನು ನೀನೇ ಎಂದು ಎಲ್ಲರಿಗೂ ವ್ಯಕ್ತವಾಗಿ ಹೋಗಿದೆ. ಹಾಯ್! ಹಾಯ್! ಆ ಪತಿಘ್ನೆ ಉದೇಪುರಿಯು ತನ್ನ ಗಂಡನನ್ನು ಕೊಂದು ನಿನ್ನನ್ನು ವರಿಸಿದಳಲ್ಲವೆ? ಧಿಃಕಾರವು! ಆ ಮಾನಿನಿಯ ಜನ್ಮಕ್ಕೆ ಧಿಃಕಾರವು! ನೀನು ಒಳ್ಳೇ ನಿಸ್ಪೃಹನೆಂದು ತೋರಿಸುವದಕ್ಕಾಗಿ ನಿನ್ನ ಯೋಗ್ಯತೆ ಮೀರಿ ಸಾಹಸ ಹೂಡಿರುವೆ; ಆದರೆ ನಿನ್ನಂತೆ ಕುಣಿಯುತ್ತಿರುವ ಬಾಲಬಡಕರು ಮಾತ್ರ ನಿನ್ನ ನಿಸ್ಪೃಹತೆಯನ್ನು ಒಪ್ಪಿದರೆ ಒಪ್ಪಬಹುದು. ರಾಗಧ್ವಂಸಕನೆಂದು ಪ್ರಜೆಗಳೆದುರಿನಲ್ಲಿ ವ್ಯಕ್ತಪಡಿಸುವದಕ್ಕಾಗಿ ತಾಸೆರಡು ತಾಸುಗಳ ಕಾಲ ನೀನು ವ್ಯಾಖ್ಯಾನವನ್ನು ಕೊಡುವೆ; ಆದರೆ ಕುರೂಪಿ ಹೆಂಗಸರೆದುರಿನಲ್ಲಿ ನೀನು ವಿರಕ್ತಿಯ ಆಡಂಬರವನ್ನಿಟ್ಟರೆ ಬಹು ನೆಟ್ಟಗಾಗಬಹುದು. ನೀನು ಪೈಗಂಬರರ ಸುಪ್ರಸಿದ್ಧ ಅನುಯಾಯಿಯಾಗಿರುವೆನೆಂದು ಜನರೆದುರಿನಲ್ಲಿ ಆಡಿಕೊಳ್ಳತೊಡಗಿರುವೆ; ಆದರೆ 'ಮತಪ್ರಸಾರ ಮಾಡು' ಎಂದೆನ್ನುವ ಪೈಗಂಬರರ ಉಕ್ತಿಗೆ 'ಬಲಾತ್ಕಾರದಿಂದ' ಎಂದೆನ್ನುವ ವಿಶೇಷಣವನ್ನು ಹಚ್ಚುವದರಲ್ಲಿಯೂ ಮಸೀದಿಯನ್ನು ಕಟ್ಟಿ ಸಾಯುಜ್ಯಪದವಿಯನ್ನು ಹೊಂದಬೇಕೆಂದಿರುವ ಅವರ ವಚನಕ್ಕೆ ಹಿಂದೂ ದೇಗುಲಗಳನ್ನು ನಾಶಪಡಿಸಿ ಅದರ ಸಮೀಚೀನ ವಸ್ತುಗಳಿಂದಲೇ ಮಸೀದಿಯನ್ನು ಕಟ್ಟಬೇಕೆಂದು ಅರ್ಥಮಾಡುವದರಲ್ಲಿಯೂ ನೀನು ಪೈಗಂಬರರ ಅತ್ಯುತ್ತಮ ಆಜ್ಞಾಧಾರಕನಾಗಿರುವೆ. ಸ್ತ್ರೀಯರ ವಿಷಯದಲ್ಲಿ ನಮ್ರನಾಗಿಯೂ ಖಾಜಿ-ಮೌಲವಿಗಳ ವಿಷಯದಲ್ಲಿ ಭಕ್ತಿಯುತನಾಗಿಯೂ ಇರಬೇಕೆಂದು ನೀನೇನೋ ಬಾಯಿಂದ ಬಡಬಡಿಸುತ್ತಿ; ಆದರೆ ಅವರು ನಿನ್ನೊಡನೆ ಸಹಕರಿಸಿದರೆ ಮಾತ್ರ ನೀನು ನಮ್ರನೂ ಭಕ್ತಿಪ್ರಧಾನನೂ ಆಗಿ, ನೋಡುವವರ ಕಣ್ಣಿಗೆ ಅಂಜನವನ್ನು ಹಾಕುವೆ. ಭಾರತವರ್ಷದ ಭಾವಶಿಖರದಲ್ಲಿ ಕುಳಿತ ಭಾರತಸಮ್ರಾಟ! ನಾನು ಹೇಳುವ ಮಾತುಗಳನ್ನು ಆತ್ಮಪರಾಮರ್ಶೆ ಮಾಡಿ ನೋಡು; ನೋಡಿ ಸತ್ಯವೊ ಮಿತ್ಯವೊ ಎಂಬುದನ್ನು ಒರೆಗೆ ಹಚ್ಚು.

ಪತ್ರದ ಉದ್ಧಟ ಲೇಖನ ಮಾಲೆಯಿಂದ ನಿನ್ನ ಮನಸ್ಸನ್ನು ಬೇಸರ ಪಡಿಸಲಾರೆನು. ಸಜಾತಿಯವರೊಡನೆ ಅಂತಃಕಲಹವನ್ನು ತ್ರಿಕಾಲದಲ್ಲಿಯೂ ಬೆಳೆಯಿಸಬೇಡ. ಸ್ತ್ರೀಯರನ್ನು ವಿಲಾಸದ ಆಟಗೆಯ ವಸ್ತುವೆಂದು ತಿಳಿಯದೆ ಪವಿತ್ರಭಾವನೆಯಿಂದ ನೋಡು. ಅವರ ಸುಸ್ವರೂಪದ ಚಿತ್ರವು ನಿನ್ನ ಕಣ್ಣೆದುರು ಬಂದಾಗ ನಿನ್ನ ತಾಯಿಯನ್ನು ಸ್ಮರಿಸು; ಅಂದರೆ ಮೊಗಲ ರಾಜ್ಯವು ಚಿರಾಯುವಾಗಿ ಉಳಿಯುವದು'

ಪತ್ರದ ಅಭಿಪ್ರಾಯವನ್ನು ಕೇಳಿ ಉದೇಪುರಿಯು ಅಧೀರಳಾದಳು. ಅವಳಿಗೆ ಬಾದಶಹನೆದುರಿನಲ್ಲಿ ಕುಳಿತುಕೊಳ್ಳುವದು ಸಹ ಅಸಹ್ಯವೆನಿಸಿತು. ಅವಳು ತಾನು ಕುಳಿತಲ್ಲಿಂದ ಎದ್ದು ಕಂಕಣದ 'ಕಿಣಿ-ಕಿಣಿ' ಶಬ್ದವಾಗುತ್ತಿರಲು ಅಂತಃಪುರದ ಕಡೆಗೆ

ನಡೆದಳು. "ಪತ್ರವು ಒಳ್ಳೇ ಬೋಧಪ್ರದವಾಗಿರುವದು. ಯಾವ ಖಾಜಿಯು ಇದನ್ನು ಬರೆದಿರಬಹುದು?" ಉದೇಪುರಿಯು ಹೋಗು ಹೋಗುತ್ತಾ ಹೀಗೆ ತನ್ನೊಳಗೆ ತಾನೇ ಅಂದದ್ದನ್ನು ಕೇಳಿ, ಬಾದಶಹನು ಅವಳನ್ನು ಮಾತನಾಡಿಸುವ ಬಯಕೆಯಿಂದ "ಇದು ಸಾಲಿಮುಲ್ಲನ ಹಸ್ತಲಿಖಿತ ಪತ್ರಿಕೆಯು" ಎಂದಂದನು.

——

## ಸಂನ್ಯಾಸಿಯ ಸಾಕ್ಷಾತ್ಕಾರ.

—೦೦—

ಇಳಿಹೊತ್ತಿನ ಸಮಯವಾಗಿತ್ತು. ಪ್ರಕೃತಿದೇವಿಯು ತನ್ನ ಮೆಚ್ಚಿನ ರಾಗ ಪತ್ತಲವನ್ನುಟ್ಟುಕೊಂಡು, ಪಶ್ಚಿಮ ದಿಗಂತದಲ್ಲಿ ನಿಂತು ನೋಟಕರ ಕಣ್ಮನಗಳನ್ನು ಸೆಳೆಯುತ್ತಿದ್ದಳು. ಪುಟ್ಟ-ಪುಟ್ಟ ಮೀನುಗಳು ನೀರಿನಿಂದ ಮೇಲಕ್ಕೆ ಹಾರುವ ಚಂದ ದಿಂದಲೂ, ಮೀನುಗಳನ್ನು ಹಿಡಿಯಲು ಹೊಂಚಿರಿವ ಸಾರಸ ಹಕ್ಕಿಗಳ ಗಾಂಭೀರ್ಯ ದಿಂದಲೂ, ಆ ಹಕ್ಕಿಗಳನ್ನು ಹೊಡೆಯಲು ಟೊಂಕಕಟ್ಟಿ ನಿಂತಿರುವ ಬಿಲ್ಲುಗಾರರ ಸಂಕುಚಿತ ಭಾವದಿಂದಲೂ, ಆ ಬಿಲ್ಲುಗಾರರಿಗೆ ಹೆದೆಯೇರಿಸುವದಕ್ಕೆ ಸೂಚನೆಯನ್ನು ಕೊಡುತ್ತಾ ಅವರ ಪಕ್ಕದಲ್ಲಿ ಮೌನವಾಗಿ ನಿಂತಿರುವ ಅಪ್ರಬುದ್ಧ ಬಾಲಕರ ಆನಂದಾತಿ ಶಯದಿಂದಲೂ, ಆ ಸುಮನೋಹರವಾದ ಸ್ಥಳವು ಕರುಣಾಜನಕವಾಗಿ ಕಂಡರೂ ಆ ಚಪಲ ಪಕ್ಷಿಗಳನ್ನು ಹೊಡೆಯಲು ದುಸ್ಸಹವಾದುದನ್ನು ನೋಡಿ ಪೆಚ್ಚು ಮೋರೆ ಹಾಕಿದ ಕೀಳುತರದ ಬಿಲ್ಲುಗಾರರ ವಿಷಾದಾಂತ ಮುಖವನ್ನೂ, ಅವರನ್ನು ಆಡಿಗಡಿಗೆ ತಿರಸ್ಕಾರದಿಂದ ನೋಡುತ್ತಿರುವ ಆ ಬಾಲಕರ ಕ್ರೂರ ದೃಷ್ಟಿಯನ್ನೂ, ಮೇಲೆ ಹಾರುವ ಸಾರಸ ಹಕ್ಕಿಗಳ ನೆರಳು ನೀರಿನಲ್ಲಿ ಬೀಳಲು ಮೀನುಗಳು ಹೆದರಿ ಗುಪ್ತ ಸ್ಥಳಗಳಲ್ಲಿ ಅಡಗುವಾಗ ಆ ಖೇಚರಗಳು ಮತ್ತೊಂದು ಸ್ಥಳಕ್ಕೆ ಹೋಗುವಾಗಿನ ಔದಾಸೀನ್ಯ ಪ್ರಕೃತಿಯನ್ನೂ ನೋಡಿದರೆ 'ದೇವಾ, ನಿನ್ನ ಲೀಲೆಯು ಅಗಾಧವಾದುದು' ಎಂದೆನ್ನುವಂತಹ ಒಂದು ಬಗೆಯ ಆನಂದವು ನೋಟಕರ ಹೃದಯ ಭಿತ್ತಿಯಿಂದ ಹೊರಡದಿರುತ್ತಿದ್ದಿಲ್ಲ. ಅದೇ ಅಸ್ತಂಗತನಾಗುತ್ತಿರುವ ಸೂರ್ಯನೊಂದು ಕಡೆ; ವಾಯುಲಹರಿಯಿಂದೇಳುವ ಸಣ್ಣ-ಪುಟ್ಟ ಜಲತರಂಗಗಳು ಇನ್ನೊಂದೆಡೆ. ನದಿಯ ಎಡ-ಬಲದ ತಟಾಕಗಳಲ್ಲಿ ಸಣ್ಣ-ದೊಡ್ಡ ಕೆಂಪು-ನೀಲಿಯ ಪೊದೆಗಳು ಸಂಜೆಯ ತಂಗಾಳಿಯ ಹೊಡೆತಕ್ಕೆ ಸಿಕ್ಕು, ವಿರಹವ್ಯಥೆಯಿಂದ ಬಳಲಿ ಬೆಂಡಾದ ರಮಣಿಯು ಪತಿಯ ದರ್ಶನವಾದಾಗ ಒಯ್ಯಾರದಿಂದ ಅತ್ತಿತ್ತ ಅಲೆದಾಡುವಂತೆ, ಎಡಬಲಗಳಿಗೆ ಸ್ವಲ್ಪಸ್ವಲ್ಪವಾಗಿ ಬಳುಕುವ ಅಂದವು ಮತ್ತೊಂದೆಡೆ. ಹೀಗೆ ಆ ಯಮುನಾ ತಟಾ ಕವು—ಮೊದಲೆ ಶೋಭಾಯಮಾನವಾಗಿದ್ದ ಆ ಯಮುನಾ ದಂಡೆಯು—ಮತ್ತಿಷ್ಟು ಶೋಭಾಯಮಾನವಾಗಿ ಚಂದ್ರಮನ ಶುಭೋದಯವನ್ನು ಹಾರೈಸುತ್ತಾ ಮೆಲ್ಲ ಮೆಲ್ಲನೆ ನಡೆದಿತ್ತು.

ಮೇಲೆ ಹೇಳಿದ ಆ ಪ್ರಶಾಂತಸಮಯದಲ್ಲಿ ಒಂದೇ ಸ್ವಭಾವದ ಎರಡು ವ್ಯಕ್ತಿಗಳು ಆ ಯಮುನಾನದಿಯ ವಾಲುಕಾಮಯ ಪ್ರದೇಶದಲ್ಲಿ ಮೌನವಾಗಿ ಕುಳಿತಿದ್ದರು. ಆ ಎರಡು ವ್ಯಕ್ತಿಗಳ ಉಡಿಗೆ-ತೊಡಿಗೆಗಳು ಪರಸ್ಪರ ವಿರುದ್ಧವಾಗಿದ್ದವು. ಒಂದು ವ್ಯಕ್ತಿಯು ಮೈಮುಚ್ಚುವಂತಹ ಉದ್ದವಾದ ಅಂಗಿಯನ್ನು ತೊಟ್ಟಿದ್ದರೆ, ಇನ್ನೊಂದು ವ್ಯಕ್ತಿಯು ಗಿಡ್ಡತೋಳಿನ, ಗಿಡ್ಡ ಅಂಗಿಯನ್ನು ತೊಟ್ಟಿದ್ದಿತು. ಮೊದಲಿನ ವ್ಯಕ್ತಿಯು ತಲೆಗೆ ಜರದ ಶಿರೋವೇಷ್ಟನವನ್ನು ಸುತ್ತಿದ್ದರೆ ಮತ್ತೊಂದು ವ್ಯಕ್ತಿಯು ತಲೆಗೆ ಮುತ್ತು-ರತ್ನದಿಂದ ಕೂಡಿದ ಒಡವೆಗಳಿಂದ ಅಲಂಕರಿಸಿಕೊಂಡಿದ್ದಿತು. ಒಂದು ಜೀವಿಯ ಕೊರಳಲ್ಲಿ ರುದ್ರಾಕ್ಷಿ ಮಾಲೆಯಿದ್ದರೆ, ಎರಡನೆಯದರ ಕಂಠದಲ್ಲಿ ದೊಡ್ಡ ದೊಡ್ಡ ಮುತ್ತಿನ ಜೋಡೆಳೆಯ ಸರವೊಂದು ಇದ್ದಿತು. ಮೊದಲನೆಯ ಪ್ರಾಣಿಯ ಕೈಯಲ್ಲಿ ಒರೆಗೂಡಿದ ಬಂಗಾರದ ಹಿಡಿಕೆಯ ಡಮಾಸ್ಕಸಿನ ಕತ್ತಿಯಿದ್ದರೆ, ಇನ್ನೊಂದರ ಕೈಯಲ್ಲಿ ಕತ್ತಿಯಾಕಾರದ ಪುಷ್ಪಗುಚ್ಛವೊಂದಿದ್ದಿತು. ಒಂದರ ಕಂಠವು ಸುಶ್ರಾವ್ಯವೂ ಸುಮನೋಹರವೂ ಆಗಿದ್ದು, ಇನ್ನೊಂದರ ಗರಳವು ಧೀರೋದಾರವೂ ಗಾಂಭೀರ್ಯವೂ ಆಗಿದ್ದಿತು. ಒಟ್ಟಿನಲ್ಲಿ ವಿಶ್ವಸೂತ್ರಧಾರಿಯ ವಿಚಿತ್ರ ವಿಶ್ವರಂಗದಲ್ಲಿ ಮಾನಿನಿಯ ಪಾತ್ರವನ್ನು ವಹಿಸಿದ ಅಭಿನೇತ್ರಿ ಬದ್ರುನ್ನಿಸೆಯೂ, ಪುರುಷಪಾತ್ರವನ್ನು ವಹಿಸಿದ ನಾರಾಯಣದೇವನೂ ಬಾಹ್ಯಾಡಂಬರಗಳಿಂದ ಪರಸ್ಪರ ವಿಶುದ್ಧವಾಗಿದ್ದರೂ ಅಂತರಂಗದಲ್ಲಿ ಪ್ರವಹಿಸುವ ಅಂತಃಕರಣವು ಮಾತ್ರ ಇಬ್ಬರಲ್ಲಿಯೂ ಒಂದೇ ತೆರನಾಗಿದ್ದಿತು. ನಾರಾಯಣದೇವನು ತನ್ನ ಮೌನವನ್ನು ಖಂಡಿಸಿ:—"ಯವನೀ, ಸನಾತನ ಧರ್ಮೀಯನಾದ ನಾನು ಸನಾತನ ಧರ್ಮದ ಹಿತಶತ್ರುವಾದ ಬಾದಶಹನ ಸೇವಾವೃತ್ತಿಯನ್ನು ಕೈಕೊಂಡು ಬಹು ಮೂರ್ಖನಾದೆನು ಮುಸಲ್ಮಾನರೆಲ್ಲರೂ ನನ್ನನ್ನು ತೀರ ಕ್ಷುಲ್ಲಕ ವ್ಯಕ್ತಿಯೆಂದು ಕಾಣತೊಡಗಿರುವರು."

'ಸರದಾರರೇ!' ಯುವನಿಯು ಯುವಕನನ್ನು ಸಂಬೋಧಿಸಿ; 'ನೀವು ಮುಸಲ್ಮಾನ ಮತಕ್ಕೆ ಕಲಂಕ ತರಬೇಡಿರಿ. ಹಿಂದುಗಳಂತೆ ಅವರು ಪರಮತದ್ವೇಷಿಗಳಿರುವದಿಲ್ಲ."

"ಇದು ನಿನ್ನ ಸಹಜವಾದ ಜಾತ್ಯಾಭಿಮಾನದ ಮಾತಾಗಿದೆ. ಆಲಂಗೀರನ ದುಷ್ಕೃತಿಯನ್ನು ನಾನು ಕಣ್ಣಾರೆ ನೋಡಿರುವೆನು."

"ಹಾಗಾದರೆ ನೀವು ಬಾದಶಹರ ಸೇವಾವೃತ್ತಿಯಲ್ಲೇಕೆ ನಿಂತಿರಿ?"

"ಒಂದು ವಿಶಿಷ್ಟಕಾರ್ಯದ ಸಲುವಾಗಿ ಹಾಗೆ ನಿಲ್ಲಬೇಕಾಯಿತು."

"ಸರದಾರರೇ, ನಿಮ್ಮ ತಿಳುವಳಿಕೆಯು ತಪ್ಪಾಗಿರುವದು. ನಿಮ್ಮನ್ನು ತೀರ ಕ್ಷುಲ್ಲಕ ವ್ಯಕ್ತಿಯೆಂದು ತಿಳಿಯುವದಕ್ಕೆ ವೈಯಕ್ತಿಕ ಕಾರಣವಲ್ಲದೆ, ಮತಸಂಬಂಧವಾದ ಯಾವ ಪಕ್ಷಪಾತಭೇದವೂ ಕಾರಣವಾಗಿರುವದಿಲ್ಲ. ನಿಮ್ಮ ಮೇಲೆ ಬಾದಶಹನ ಸಂಪೂರ್ಣ ವಿಶ್ವಾಸವು ಬಿದ್ದಿತೆಂದರೆ, ನಿಮ್ಮಂಥ ಉತ್ಕರ್ಷಸಾಧಕರು ನೀವೇ ಆಗುವಿರಿ. ಮಥುರೆಯಲ್ಲಿ ನಿಮ್ಮಿಂದ ಏಟು ತಿಂದಿರುವದರಿಂದ ದಂಡನಾಯಕನು ನಿಮ್ಮ ಮೇಲೆ ಸಿಟ್ಟಾಗಿರುವನು; ಆದರೆ ಆತನ ಸಿಟ್ಟನ್ನು ಕೇಳುವವರಾರು?"

"ಬದ್ರುನ್ನಿಸೆ, ನಿಮ್ಮ ಅಪ್ಪನ ಕುಟಿಲ ನೀತಿಯು ಇನ್ನೂ ನಿನ್ನ ಪ್ರತ್ಯಯಕ್ಕೆ ಬಂದಿರುವದಿಲ್ಲ. ಸ್ವತಃ ರಾಜನೇ ಧರ್ಮಾಂಧನಾದ ಮೇಲೆ ಪ್ರಜೆಗಳಾದ ವಿಧರ್ಮಿಯರ ಗೋಳನ್ನು ಕೇಳುವವರಾರು? ಬಾದಶಹನ ಧರ್ಮಾಂಧತೆಯನ್ನು ಹೋಗಲಾಡಿಸುವದಕ್ಕಾಗಿ ಯೋಗ್ಯನಾದ ಮಂತ್ರಿಯು ಬೇಕಾಗುವನು. ಮಂತ್ರಿಯೂ ಧರ್ಮಾಂಧನಾದರೆ ದೇಶದ ಕಲ್ಯಾಣವು ಅಪಕ್ವವಾಗುವದು. ಅಂಥ ಸಮಯದಲ್ಲಿ ರಾಜನನ್ನು ಪದಚ್ಯುತಗೊಳಿಸಿ ನೂತನ ರಾಜ್ಯಾಂಗವ್ಯವಸ್ಥೆಯನ್ನು ಸೃಜಿಸುವದಕ್ಕಾಗಿ ಪ್ರಜೆಗಳು ಸಾಹಸಮಾಡಬೇಕಾಗುತ್ತದೆ."

"ಸರದಾರರೆ! ನಿಮ್ಮ ಮಾತುಗಳು ಅಕ್ಷರಶಃ ನಿಜವಿರುವವು. ನಾನು ಬಾದಶಹರಿಗೆ ತಮ್ಮಲ್ಲಿ ಸಹಾನುಭೂತಿ, ಸೌಹಾರ್ದಗಳುದಯಿಸುವಂತೆ ಯೋಗ್ಯತೆ ಮೀರಿ ಸಾಹಸ ಮಾಡುವೆನು; ಆದರೆ ನೀವು ಕೃತಕರ್ಮಕ್ಕಾಗಿ ಪಶ್ಚಾತ್ತಾಪ ಪಡಬೇಡಿರಿ. ಇದರಿಂದ ನನ್ನ ಅಂತರಂಗವು ಕುದಿಯುತ್ತದೆ."

"ಶಹಜಾದಿ, ಕೃತಕರ್ಮಕ್ಕಾಗಿ ಪಶ್ಚಾತ್ತಾಪಪಡುವ ಸ್ವಭಾವವು ನಾರಾಯಣದೇವನದಲ್ಲ. ನಾನು ಸಾರಾಸಾರ ವಿಚಾರ ಮಾಡಿಯೇ ಈ ಯವನ ಸಿಂಹಾಸನದ ಸೇವಕನಾದೆನು. ರಾಜನ ಅವಿವೇಕತನಕ್ಕಾಗಿ ಈಗ ನನ್ನ ಮನಸ್ಸು ತಳಮಳಗೊಳ್ಳತೊಡಗಿದೆ; ಆದರೆ ಏನು ಮಾಡುವದಿದೆ? ನನ್ನ ಪ್ರತಿಜ್ಞೆಯಂತೆ ನಾನು ನಡೆಯಬೇಕಾಗಿದೆ."

ಬದ್ರುನ್ನಿಸೆಯು ಹೆಚ್ಚು ವೇಳೆಯನ್ನು ಅಲ್ಲಿ ಕಳೆಯುವಂತಿರಲಿಲ್ಲ. ಅವಳು ಸೂರ್ಯಾಸ್ತವಾದುದನ್ನು ನೋಡಿ ಅರಮನೆಯ ಕಡೆಗೆ ನಡೆದಳು.

ನಾರಾಯಣದೇವನು ಒಬ್ಬನೇ ಆ ವಾಲುಕಾಮಯದ ತಣ್ಣನೆಯ ಪ್ರದೇಶದಲ್ಲಿ ಕುಳಿತಿದ್ದನು. ಬಾದಶಹನು ಅವನನ್ನು ಮುಸಲ್ಮಾನ ಮತಕ್ಕೆ ಸೇರಿಸುವದಕ್ಕಾಗಿ ಒತ್ತಾಯ ಮಾಡತೊಡಗಿದ್ದನು; ಆದರೆ ಅವನು ಯುಕ್ತಾಯುಕ್ತ ವಿವೇಚನೆಯಿಲ್ಲದೆ ಧುಡಂಪ್ರವೇಶ ಮಾಡುವ ದುಡುಕು ಪ್ರಕೃತಿಯವನಾಗಿರಲಿಲ್ಲ. ತನ್ನ ಅಪಮಾನ ಮಾಡಿದ, ಹಿಂದೂ ಧರ್ಮದ ಹೇಯಕೃತಿಯ ಚಿತ್ರವು ಆತನ ಕಣ್ಣೆದುರಿಗೆ ಬಂದೊಡನೆಯೇ ಮತಾಂತರಕ್ಕೆ ಆತನ ಮನಸ್ಸುಸಮ್ಮತಿ ಕೊಡುವುದು; ಆದರೆ ಉತ್ತರ ಕ್ಷಣದಲ್ಲಿಯೇ ಅಚ್ಚಳಿಯದ ಆರ್ಯ ಸಂಸ್ಕೃತಿಯು ನೆನಪು ಆಗುವುದು. ಕೂಡಲೆ ಆತನ ಆ ಮನಸ್ಸು ಧರ್ಮಾಂತರಕ್ಕೆ ಹಿಂದೆಗೆಯುವುದು. ಹೀಗೆ ಅವನು ಎಷ್ಟೋ ವೇಳೆಯವರೆಗೆ ಆಲೋಚಿಸುತ್ತಾ ಕುಳಿತಿದ್ದನು. ವಾಯು ಸೇವನೆಗಾಗಿ ಬಂದ ನಾಗರಿಕ ತರುಣ-ತರುಣಿಯರೆಲ್ಲರೂ ಆಗಲೇ ಸ್ವಸ್ಥಳಕ್ಕೆ ಹಿಂದಿರುಗಿದ್ದರು.

ನಾರಾಯಣದೇವನು ಹೀಗೆ ಆಲೋಚನಾಪರನಾಗಿ ಕುಳಿತಿರಲು, ದೂರದಲ್ಲಿ ಅವನಿಗೊಂದು ಪುರುಷಾಕೃತಿಯು ಕಾಣಿಸಿತು. ದೂರದಲ್ಲಿ ಅಸ್ಪಷ್ಟವಾಗಿ ಕಾಣಿಸುತ್ತಿದ್ದ ಆ ವ್ಯಕ್ತಿಯು ಹತ್ತರ-ಹತ್ತರ ಬಂದಂತೆಲ್ಲ ಸುಸ್ಪಷ್ಟವಾಗಿ ಕಾಣಹತ್ತಿತು. ಅದು ಆತನ ಶಿರ ಹತ್ತಿರಕ್ಕೆ ಬಂದಾಗ ಆತನೊಬ್ಬ ಹಿಂದೂಧರ್ಮವೀರ-ಬುವಾ-ಎಂದು ತಿಳಿದನು.

"ಯುವಕಾ, ಇಷ್ಟು ಹೊತ್ತಿನಲ್ಲಿ ಇಲ್ಲಿ ಕುಳಿತು, ಯಾರ ಮಾರ್ಗ ನಿರೀಕ್ಷಣೆ ಮಾಡತೊಡಗಿರುವೆ? ಈ ಹೊತ್ತಿನಲ್ಲಿ ಇಲ್ಲಿ ಯಾವ ಪ್ರಾಣಿಯೂ ಸುಳದಾಡುತ್ತಿರುವದಿಲ್ಲ. ಇದು ನನ್ನ ಆಶ್ರಮವು; ತಪೋಭೂಮಿಯು."

ಯುವಕನು ಭಕ್ತಿಪರವಶನಾಗಿ ಯತಿಶ್ರೇಷ್ಠನಿಗೆ ನಮಿಸಬೇಕೆಂದಿರುವಷ್ಟರಲ್ಲಿಯೇ ದಂಡಕಮಂಡಲುಧಾರಿಯಾಗಿ, ಕಾಷಾಯವಸ್ತ್ರ ಪರಿಧಾನಮಾಡಿದ, ಆ ಯತಿಯು ಅಲ್ಲಿಂದ ಹೊರಡಲನುವಾದನು. ಆಗ ಆ ಯುವಕನು ಅವರನ್ನು ತಡೆದು ಹೀಗೆ ನುಡಿದನು:—"ಯತಿಶ್ರೇಷ್ಠರೇ! ತಮ್ಮ ವೇಷ-ಭೂಷಣಗಳಿಂದ ತಾವು ಹಿಂದೂ ಧರ್ಮವೀರರಂತೆ ತೋರುತ್ತಿರುವಿರಿ; ಆದರೆ ಹಿಂದೂಧರ್ಮಕ್ಕೆ ಕಟ್ಟಾ ವೈರಿಯಾದ ಆಲಂಗೀರಬಾದಶಹನು ಹಿಂದೂ ಸಂನ್ಯಾಸಿಗಳಾದ ತಮಗೆ ತನ್ನ ರಾಜ್ಯದಲ್ಲಿ ಆಶ್ರಯಕೊಟ್ಟಿರುವದನ್ನು ನೋಡಿದರೆ, ಆಶ್ಚರ್ಯವಾಗುತ್ತದೆ." ಎಂದು ನುಡಿದು "ಸಂನ್ಯಾಸಿಗಳ ತಪಃಪ್ರಭಾವವು ಅವರ್ಣನೀಯವು" ಎಂದು ಉದ್ಗಾರ ತೆಗೆದನು. ನಾರಾಯಣದೇವನ ಮಾತಿನಿಂದ ಯತಿಯು ನಸುನಕ್ಕು:—"ಯುವಕಾ, ನಿನ್ನ ಮಾತುಗಳು ಯಥಾರ್ಥವಾದವುಗಳು; ಆದರೆ ನಾನು ಹುಟ್ಟಾ ಮುಸಲ್ಮಾನನು. ಆಲಂಗೀರನೂ ನಾನೂ ಬಾಲ್ಯದಲ್ಲಿ ಮಿತ್ರರಾಗಿದ್ದೆವು. ನಾವಿಬ್ಬರೂ ಮುಲ್ಲಾಸಾಲಿ ಎಂಬೊಬ್ಬ ಗುರುವಿನ ಹತ್ತಿರ ಬಹಳ ಕಾಲ ವಿದ್ಯಾರ್ಥಿಗಳಾಗಿದ್ದೆವು. ಮುಂದೆ ಸ್ವಲ್ಪ ಕಾಲವಾದ ಬಳಿಕ ನಾನೊಬ್ಬ ಇಸಾಯಿ ಗುರುವಿನ ಬಳಿಯಲ್ಲಿ ವ್ಯಾಸಂಗ ಮಾಡಿದೆನು. ಇಸಾಯಿಮತದ ಮುಖ್ಯ ತತ್ವಗಳೆಲ್ಲವನ್ನು ನೋಡಿದೆನು. ಅನಂತರ ನಾನು ಹಿಂದೂ ಶಾಸ್ತ್ರಗಳ ಅಧ್ಯಯನ ಮಾಡಿದೆನು. ಅಂದಿನಿಂದಲೂ ನಾನು ಐಹಿಕ ವಿಷಯದ ಕಡೆಗೆ ಗಮನಕೊಡದೆ, ಪವಿತ್ರವಾದ ಅಧ್ಯಾತ್ಮಿಕ ತತ್ವಗಳನ್ನು ಪರಿಶೀಲಿಸತೊಡಗಿದೆನು. ಬಳಿಕ ನಾನು ಜ್ಯೋತಿಷಶಾಸ್ತ್ರವನ್ನು ನೋಡಿದೆನು. ವರಾಹಮಿಹಿರಾಚಾರ್ಯನ ಭೌತಿಕಶಾಸ್ತ್ರವು, ಲೀಲಾವತಿಯ ಗಣಿತಶಾಸ್ತ್ರವು, ಭಾಸ್ಕರಾಚಾರ್ಯನ ಜ್ಯೋತಿಷಶಾಸ್ತ್ರವು ಇವೆಲ್ಲ ನನ್ನ ಮನಸ್ಸಿಗೆ ಬಹಳವಾಗಿ ಹಿಡಿದವು. ಹಿಂದು ಧರ್ಮದಷ್ಟು ಪವಿತ್ರತಮವಾದ ಧರ್ಮವು ಮತ್ತೊಂದಿರದೆಂದು ಅಂದಿನಿಂದ ನನ್ನ ಮನವರಿಕೆಯಾಯಿತು. ಕೂಡಲೆ ನಾನು ಹಿಂದು ಸಂನ್ಯಾಸಿಗಳ ಆಚರಣೆಯನ್ನು ಅನುಸರಿಸತೊಡಗಿದೆನು. ಹೀಗಿದ್ದರೂ ನನಗೆ ಹಿಂದುಗಳೊಡನೆ ಸವ್ಯವಹಾರ ಮಾಡಬೇಕೆಂಬ ಇಚ್ಛೆಯಿರುವದಿಲ್ಲ. ಧರ್ಮದಿಂದ ವರ್ತಿಸಿ ದೇವರ ಸಾನ್ನಿಧ್ಯವನ್ನು ಪಡೆಯಬೇಕೆಂದು ಈ ದೇಹಧಾರಣೆ ಮಾಡಿರುವ ನನಗೆ ಸವ್ಯವಹಾರ ಮಾಡಬೇಕೆಂಬ ದುರಾಗ್ರಹಕ್ಕೆಬಿದ್ದು ಪರಸ್ಪರ ಕಚ್ಚಾಡುವದು ಯಾವಾಗಲೂ ಸೇರುವದಿಲ್ಲ. ಒಮ್ಮೆ ನಾನು ಜ್ಯೋತಿಷ ಪರಿಶೀಲಿಸುತ್ತಿರಲು ಒಬ್ಬ ಹಿಂದು ವೀರನು ಯೋಗ್ಯ ಶಿಕ್ಷಣವಿಲ್ಲದೆ ಆಗ್ರಾದಲ್ಲಿ ಮುಸಲ್ಮಾನ ದೀಕ್ಷೆಯನ್ನು ಹೊಂದುವನೆಂದು ತಿಳಿದು ಬಂದಿತು. ಪವಿತ್ರವಾದ ಹಿಂದುಧರ್ಮವನ್ನು ನಮ್ಮಂಥ ವಿಧರ್ಮೀಯರೇ ಸೇರುತ್ತಿರಲಿಕ್ಕೆ, ಹಿಂದುಧರ್ಮದಲ್ಲಿಯೇ ಇದ್ದ ಆ ಹಿಂದೂವೀರನು ಹಿಂದುಧರ್ಮವನ್ನು ತ್ಯಜಿಸಬೇಕಾದರೆ ಆತನ

ಬಾಲ್ಯವು ಅಶಿಕ್ಷಿತೆಯಲ್ಲೇ ಕಳೆದುಹೋಗಿರಬೇಕೆಂದು ಆಲೋಚಿಸಿ, ಆತನ ಮತಾಂತರವನ್ನು ತಡೆಯುವ ಸಲುವಾಗಿ ನಾನು ಇಲ್ಲಿಗೆ ಬಂದೆನು; ಮತ್ತು ನನ್ನ ಬಾಲ್ಯಮಿತ್ರನಾದ ಬಾದಶಹನನ್ನು ಹೋಗಿ ಕಂಡೆನು. ಆತನು ನನ್ನ ಕೇಳಿಕೆಯಂತೆ ಈ ಸ್ಥಳವನ್ನು ನನಗೆ ವಾಸಕ್ಕಾಗಿ ಕೊಟ್ಟಿರುವನು.''

ಯತಿಯ ಮಾತುಗಳನ್ನು ಕೇಳಿ ನಾರಾಯಣದೇವನಿಗೆ ಆನಂದ ಆಶ್ಚರ್ಯಗಳು ಏಕಕಾಲದಲ್ಲುಂಟಾದವು. ಆ ಮುಸಲ್ಮಾನ ಸಾಧುವು ಹಿಂದೂ ತತ್ವವನ್ನು ಪರಿಶೀಲಿಸಿ, ಅದರಂತೆ ನಡೆಯುವದಕ್ಕಾಗಿ ಉತ್ಕಂಠಿತನಾದದ್ದನ್ನು ನೋಡಿ, ಅವನು ಒಬ್ಬ ಮುಮುಕ್ಷುವಿರಬೇಕೆಂದು ಭಾವಿಸಿದನು. ನಾರಾಯಣದೇವನು ಆ ಸಂನ್ಯಾಸಿಯಿಂದ ಯೋಗ್ಯ ಉಪದೇಶವನ್ನು ಹೊಂದಬೇಕೆಂದು ಯೋಚಿಸಿ, ತನ್ನ ಜನ್ಮವೃತ್ತವೆಲ್ಲವನ್ನೂ ಬಿನ್ನೈಸಿಕೊಂಡನು. ಆಗ ಆ ಸಾಧುವು:-''ನಾರಾಯಣದೇವ, ತಾತ್ವಿಕ ವಿಷಯದಲ್ಲಿ ಮಾತ್ರವೇ ಸನಾತನ ಧರ್ಮವು ಪ್ರಗತಿಗಾಮಿಯಾಗಿದೆ ಎಂದು ತಿಳಿಯಬೇಡ. ಹಿಂದೂ ಸಂಸ್ಕೃತಿಯಷ್ಟು ಉಚ್ಚ ಸಂಸ್ಕೃತಿಯು ಉಳಿದ ಯಾವ ಧರ್ಮದಲ್ಲಿಯೂ ಇಲ್ಲವೆಂಬುದನ್ನು ಚೆನ್ನಾಗಿ ತಿಳಿದಿರು. ಹಿಂದೂ ಧರ್ಮದಲ್ಲಿಯ ಉತ್ತಮವಾದ ಧಾರ್ಮಿಕ ಗ್ರಂಥದ ಹಾಗಿರುವ ಗ್ರಂಥಗಳು ಅನ್ಯಧರ್ಮದಲ್ಲಿ ದೊರೆಯುವದು ದುರ್ಲಭವೇ ಸರಿ. ಭಗವದ್ಗೀತೆಯನ್ನು ನೋಡಿ, ಅದರ ಮೋಹದಿಂದ ಎರಡು ವೇಳೆ ಅದರ ನಕಲು ಮಾಡಿರುವೆನು. ಭಾರತ ರಾಮಾಯಣಗಳನ್ನು ಸಹ ನೋಡಿರುವೆನು. ನಾರಾಯಣದೇವ, ಹಿಂದುಗಳಲ್ಲಿ ಶಿಕ್ಷಿತ ವ್ಯಕ್ತಿಗಳು ತೀರ ಕಡಿಮೆಯಾಗಿ, ರೂಢ ವ್ಯಕ್ತಿಗಳು ಹೆಚ್ಚುತ್ತಿರುವವರಿಂದಲೇ ಹಿಂದೂ ಧರ್ಮವು ಕ್ಷೀಣಿಸುತ್ತಿದೆ. ನಾನು ಹೇಳುವ ಮುಖ್ಯ ವಿಷಯವೇನಂದರೆ, ವೀರಪಾಲನಂತಹ ಒಳಗೊಂದು ಹೊರಗೊಂದು ಹೇಳುವ ಸ್ವಾರ್ಥೀ ಜನರನ್ನು ತುಂಡರಿಸಿ ಚಲ್ಲು; ಇಸ್ಮಾಯಿಲ ಶಹನಂತಹ ಕಾಮುಕ ಅರಸನನ್ನು ಯಮಸದನಕ್ಕಟ್ಟು; ಆದರೆ ನೀನು ಹಿಂದೂ ಧರ್ಮದಿಂದ ಮಾತ್ರ ನುಸುಳಬೇಡ.''

ಸಂನ್ಯಾಸಿಯ ಮಾತಿನಿಂದ ನಾರಾಯಣದೇವನ ತಲೆಯಲ್ಲಿ ಫಕ್ಕನೆ ಪ್ರಕಾಶವು ಬಿದ್ದಿತು. ಆತನು ಆ ಬುವಾನ ಮಾತಿನಂತೆ ನಡೆಯಬೇಕೆಂದು ನಿರ್ಧರಿಸಿ, ಆಗ್ರಾದ ಕಡೆಗೆ ನಡೆದನು.

---

## ಮಾತಿನ ಚಾಣಾಕ್ಷತೆ.

—:(:::):—

ಔರಂಗಜೇಬ ಬಾದಶಹನು ಮೌನವಾಗಿ ಕುಳಿತಿದ್ದನು. ಅವನು ಬಿಜಾಪುರದ ಮೇಲೆ ಯುದ್ಧಕ್ಕೆ ಹೊರಡುವ ಸಲುವಾಗಿ ಸೇನೆಯನ್ನು ಒಳ್ಳೇ ವ್ಯವಸ್ಥೆಯಿಂದ ಸಂಗ್ರಹಿಸಿದ್ದನು; ಆದರೂ ಅವನ ಮನಸ್ಸು ಇಬ್ಬಾಗವಾಗಿತ್ತು. ಯುದ್ಧಕ್ಕೆ ಹೊರಡುವದೇ ಸರಿಯೆಂದು ಬಾದಶಹನು ಒಮ್ಮೆ ನಿಶ್ಚಯಿಸಿದರೆ, ಸಾಲಿಮುಲ್ಲನ ಪತ್ರದ ಕಡೆಗೆ ಅವನ ದೃಷ್ಟಿಯು ಹೊರಳಲು, ಸಜಾತಿಯವರ ಮೇಲೆ ಕೈ ಎತ್ತುವದಕ್ಕೆ ಅವನ ಮನಸ್ಸು ಹಿಂದೆಗೆಯುವುದು. 'ಸಾಲಿಮುಲ್ಲನು ಪತ್ರವನ್ನೇಕೆ ಬರೆದನು? ಬರೆದರೂ ಅದಿ

ಯಿಲ್ಲ; ಆದರೆ ಆ ಸರದಾರನು ಅಷ್ಟು ತೀವ್ರಗತಿಯಿಂದ ಏಕೆ ಬಂದನು? ಆ ಸರದಾರನು ಅಷ್ಟು ತೀವ್ರ ಬಂದರೂ ಚಿಂತೆಯಿಲ್ಲ; ನಾನೇ ಇನ್ನೆರಡುದಿನ ಬಿಟ್ಟು ಓದಿದ್ದರೆ ಬಳಿ ತಾಗುತ್ತಿತ್ತಲ್ಲವೆ?' ಮುಂತಾದ ಆಲೋಚನೆಗಳಿಂದ ಅವನ ಮನಸ್ಸು ಕೆಲಸ ಮಾಡ ತೊಡಗಿತ್ತು; ಆದರೆ ವಿವೇಕವು ಮನುಷ್ಯನ ಉನ್ನತಿಯ ಕಡೆಗೆ ಎಳೆಯತೊಡಗಿದರೆ, ಇನ್ನೊಂದು ವಿರೋಧವಾದ ಶಕ್ತಿಯು ಮನುಷ್ಯನನ್ನು ಅಧೋಗತಿಯ ಹಾದಿಯಲ್ಲಿ ನೂಕುವುದು. ಬಾದಶಹನ ಅವಿವೇಕತನವಾದರೂ ಹೀಗೆಯೇ ಇದ್ದಿತು. ಸಾಲಿ ಮುಲ್ಲನನ್ನು ತುಂಬಿದ ಸಭೆಯಲ್ಲಿ ಆಶಾಭಂಗ ಮಾಡಿರುವದರಿಂದ, ಅವನು ಜೀವನ ವೃತ್ತಿಗಾಗಿ ಬಹಳ ಮಾಡಿ ಬಿಜಾಪುರದ ಸುಲ್ತಾನನ ಆಶ್ರಯ ಪಡೆದಿರಬೇಕು. ಯುದ್ಧದ ವಾರ್ತೆಯು ಬಾದಶಹನ ಕಿವಿಗೆ ಮುಟ್ಟಿರುವದರಿಂದ ಭೀತನಾದ ಆ ಸುಲ್ತಾನನು ಸಾಲಿಮುಲ್ಲನಿಗೆ ಈ ರೀತಿಯಲ್ಲಿ ಪತ್ರಬರೆಯುವಂತೆ ಸೂಚಿಸಿರ ಬೇಕು.' ಮುಂತಾದ ಆಲೋಚನೆಗಳಾದರೂ ಬಾದಶಹನ ತಲೆಯಲ್ಲಿ ಬಾರದಿರಲಿಲ್ಲ. ಸದ್ಯಕ್ಕೆ ತನ್ನ ಮನಸ್ಸನ್ನು ಆಲೋಚನೆಯಿಂದ ಮುಕ್ತಮಾಡುವದಕ್ಕಾಗಿ ಅವನು ಅಬುಲಫಸಲ ಪ್ರಣೀತವಾದ 'ಐನಿ ಅಕ್ಬರಿ'ಯನ್ನು ತೆಗೆದು ಒಂದೆರಡು ಪುಟಗಳನ್ನು ತಿರುವಿ ನೋಡಿದನು; ಆದರೆ ಅದರಿಂದ ಅವನ ಮನಸ್ಸಿನ ಉದ್ವೇಗವು ಇನ್ನೂ ಹೆಚ್ಚಿತು; ಏಕೆಂದರೆ, ಐನಿ ಅಕ್ಬರಿಯಲ್ಲಿ ಅಬುಲಫಸಲ ಮಂತ್ರಿಯು ರಾಜ್ಯದ ಶಿಸ್ತನ್ನು ಕುರಿತು ಬರೆಯುತ್ತ, ಅಕ್ಬರನು "ಜೆಜಿಯಾ" ಕಂದಾಯವನ್ನು ತೆಗೆದು ಹಾಕಿ ಹಿಂದು ಗಳ ಪ್ರೀತಿ-ಆದರಗಳಿಗೆ ಪಾತ್ರನಾಗಿ ತನ್ನ ಬೊಕ್ಕಸವನ್ನು ಹೇಗೆ ತುಂಬಿದನೆಂಬ ಸಂಗತಿಯನ್ನು ಒಳ್ಳೇ ಸುರಸವಾದ ಭಾಷೆಯಲ್ಲಿ ಬರೆದಿದ್ದನು. ಹಿಂದುಗಳ ಉತ್ಕರ್ಷದ ಸುದ್ದಿಯ ವಿಚಾರವು ಬಂದ ಕೂಡಲೆ ಆಲಂಗೀರನು ಆ ಪುಸ್ತಕವನ್ನು ತೆಗೆದು ಬದಿಗಿಟ್ಟನು. ಅನಂತರ ಅವನು ಮೊಗಲ ಮೂಲಪುರುಷನಾದ ಬಾಬರನ ಜೀವನ ಚರಿತ್ರೆಯನ್ನು ತೆಗೆದುಕೊಂಡನು. ಅದರಲ್ಲಿ ಬಾಬರನು ತನ್ನ ಬಾಲ್ಯದ ಕರುಣಾಜನಕವಾದ ಸ್ಥಿತಿಯನ್ನು ಅತ್ಯಂತ ಮನೋವೇಧಕವಾಗಿ ಚಿತ್ರಿಸಿದ್ದನು. ತನ್ನ ತಂದೆಯು ಗತಿಸಲಿಕ್ಕೂ, ತನ್ನ ಮುಖ್ಯ ರಾಜ್ಯವಾದ ಫರಗನ,-ಸಮರಖಂಡ ಪ್ರಾಂತ್ಯಗಳು ಕೈಬಿಟ್ಟು ಹೋಗುವದಕ್ಕು, ಹೇಗೆ ಒಂದಕ್ಕೊಂದಕ್ಕೆ ಸಂಬಂಧಿಸಿ ತಾನು ತನ್ನ ಬಾಲ್ಯದಲ್ಲಿಯೇ ವಿಪತ್ಪರಂಪರಗಳಿಗೆ ಹೇಗೆ ಸಿಲುಕಿದನೆಂಬ ಸಂಗತಿಯನ್ನು ತನ್ನ ಆತ್ಮಕಥೆಯಲ್ಲಿ ಬಾಬರನು ರೂಪುಗೊಳಿಸಿದ್ದನು. ಎಂಥ ಕಷ್ಟದಲ್ಲಿದ್ದ ನಿಕೃಷ್ಟ ನಾದರೂ ಆ ಗ್ರಂಥವನ್ನು ಓದಿದ ಮಾತ್ರದಿಂದಲೇ ತನ್ನ ಮನಸ್ಸಿನ ಅಸಮಾಧಾನತೆ ಯನ್ನು ಬದಿಗಿಟ್ಟು ಉತ್ಸಾಹದಿಂದಲೂ ಧೈರ್ಯದಿಂದಲೂ ಕಾರ್ಯತತ್ಪರನಾಗುತ್ತಿದ್ದನು; ಆದರೆ ಬಾದಶಹನಿಗೆ ಅದರ ವಾಚನದಿಂದ ಸಮಾಧಾನವಾಗಲಿಲ್ಲ; ಏಕೆಂದರೆ, ಬಾಬರನ ಕಾಲದಲ್ಲಿ ಉತ್ತರಹಿಂದುಸ್ಥಾನವು (ಗುಜರಾತ ಒಂದನ್ನು ಬಿಟ್ಟು) ಮಾತ್ರ ಆತನ ಆಳ್ವಿಕೆಗೆ ಒಳಪಟ್ಟಿದ್ದು, ತನ್ನ ಕಾಲದಲ್ಲಾದರೂ ಇಡೀಭರತಖಂಡವೇ ಪಾದಾಕ್ರಾಂತವಾಗಿದ್ದುದರಿಂದ ಬಾಬರನು ಅಲ್ಪ ವ್ಯಕ್ತಿ, ಎಂದು ಆತನು ಮನಗಂಡಷ್ಟು

ಅಂಥ ಅಲ್ಪ ವ್ಯಕ್ತಿಯ ಜೀವನರಹಸ್ಯವನ್ನು ಓದುವದೆಂದರೆ, ಅದೊಂದು ದಂತಕಥೆ ಎಂದು ಅವನು ಭಾವಿಸಿ, ಆ ಹೊತ್ತಿಗೆಯನ್ನು ಕೆಳಗಿಟ್ಟನು; ಹಾಗು ಕೆಲ ಕ್ಷಣಗಳ ವರೆಗೆ ಸುಮ್ಮನೆ ಕುಳಿತನು. ಆ ಸಮಯವನ್ನು 'ಈ ದಿನ ಏನು ಮಾಡಿದರೆ ನನ್ನ ಮನಸ್ಸು ಸಮಾಧಾನವಾದೀತು?' ಎಂಬ ಆಲೋಚನೆಯಲ್ಲಿ ಕಳೆದಿರಬಹುದು. ಬಳಿಕ ಅವನು ತನ್ನ ಬಾಯಿಂದ "ಇಚ್ಛೆಯೇ ಆಲೋಚನೆಯ ಮೂಲವೆಂಬ ತತ್ವವನ್ನು ಕುರಾಣದಲ್ಲಿ ಎಲ್ಲಿಯೋ ಓದಿದಂತಿದೆ" ಎಂದು ಅಸ್ಫುಟವಾಗಿ ಅನ್ನುತ್ತ ತನ್ನ ದಟ್ಟವಾದ ಶ್ಮಶ್ರುರಾಶಿಯನ್ನು ಕೈಯಿಂದೊಮ್ಮೆ ಜಗ್ಗಿದನು.

ಬಾದಶಹನು ಹೀಗೆ ಅಸ್ಥಿರಮನಸ್ಕನಾಗಿ ಕುಳಿತಿರಲು, ಹೊರಗಿನಿಂದ ನಾರಾಯಣದೇವನು ಬಾದಶಹನನ್ನು ಕಾಣುವದಕ್ಕಾಗಿ ಬಂದಿರುವನೆಂದು ದೂತನೊಬ್ಬನು ಅರಿಕೆಮಾಡಿಕೊಂಡನು. ಕೂಡಲೆ ಬಾದಶಹನು ದಿವಾಣ-ಈ-ಆಮಕ್ಕೆ ನಾರಾಯಣದೇವನು ಬರುವಂತೆ ಹೇಳಿ ಕಳುಹಿಸಿ ತಾನಾದರೂ ಅವನು ಬರುವ ಮುಂಚಿತವಾಗಿಯೇ ಹೋಗಿ ಆ ದಿವಾಣಖಾನೆಯಲ್ಲಿ ಕುಳಿತಿದ್ದನು.

"ಹುಜೂರ, ನನಗೆ ಹೆಚ್ಚುದಿನ ಈ ಆಗ್ರಾದಲ್ಲಿರುವದು ಮನಸ್ಸಿರುವದಿಲ್ಲ. ತಾವು ಅಪ್ಪಣೆ ಕೊಡುವಿರಾದರೆ ನಾನು ನಾಳೆಯೇ ಸ್ವಸ್ಥಳಕ್ಕೆ ಹಿಂದಿರುಗುವೆನು."

ನಾರಾಯಣದೇವನ ಮಾತನ್ನು ಕೇಳಿ ಬಾದಶಹನು ನಸುನಕ್ಕು:—"ಏಕೆ ನಾರಾಯಣದೇವ, ನಿಮ್ಮ ದೃಷ್ಟಿಯಿಂದ ಈ ಆಗ್ರಾಪಟ್ಟಣವು ಚೆನ್ನಾಗಿರುವದಿಲ್ಲವೇನು? ನಿಮ್ಮ ಮನಸ್ಸನ್ನು ರಮಿಸುವ ಸಾಧನಗಳು ಇಲ್ಲಿ ಬೇಕಾದಷ್ಟಿರುವುದು. ಜಹಾಂದ್ರಘಾಟನಲ್ಲಿ ಹೋಗಿ ಕುಳಿತಿರೆಂದರೆ, ಮಮತಾಜ ಬೇಗಮೆಯ ಕಬರಸ್ಥಳದಿಂದ ಕಾಣುವ ಸುಂದರ ನೋಟವು ಎಂಥ ಮಾಹಾತ್ಮನನ್ನು ಕೂಡ ಕ್ಷಣ ಕಾಲ ಮುಗ್ಧನನ್ನಾಗಿ ಮಾಡದೆ ಇರದು."

"ತಾಜಮಹಲಿನ ಸೌಂದರ್ಯವನ್ನು ನೋಡುತ್ತ, ಶಾಖಾನಗರಗಳಲ್ಲಿ ಗಾಳಿಯ ನಿಮಿತ್ತ ಸುತ್ತುತ್ತ, ಕಾಲವನ್ನು ಕಸವೆಂದು ತಿಳಿದು ವೃಥಾಕಳೆಯುತ್ತಿರುವ ವಿಲಾಸಿಗರ ವಿಷಯಗಳಲ್ಲಿ ನಿಮ್ಮ ಮಾತುಗಳು ಬಹುಮಟ್ಟಿಗೆ ಅನ್ವಯಿಸುವುವು; ಆದರೆ ನಾನು ಈ ಆಗ್ರಾಪಟ್ಟಣಕ್ಕೆ ವಿಪಿನ-ಉಪವನಗಳನ್ನು ನೋಡುವದಕ್ಕಾಗಲಿ ಮಹಲು-ಶಹರುಗಳಲ್ಲಿ ತಿರುಗಾಡುವದಕ್ಕಾಗಲಿ ಬಂದಿರುವದಿಲ್ಲ. ಯಾವದೋ ಶತಕೃತ್ಯ ಮಾಡಬೇಕೆಂದು ನಿಶ್ಚಯಿಸಿ ಇಲ್ಲಿಯವರೆಗೆ ಬಂದು, ವೃಥಾ ವೇಳೆಗಳೆಯುವದು ನನ್ನ ಮನಸ್ಸಿಗೆ ಬರುವದಿಲ್ಲ." ನಾರಾಯಣದೇವನು ಖಂಡತುಂಡವಾಗಿ ಮಾತನಾಡಿದನು.

"ಹಾಗಾದರೆ ಬಿಜಾಪುರದ ಸುಲ್ತಾನನ ಸಂಬಂಧದ ನಿಮ್ಮ ಪ್ರತಿಜ್ಞೆಯು ನಿರಾಧಾರವಾದದ್ದಾಯಿತು. ನೀವು ಹೀಗೆ ನಿರಾಧಾರವಾದ ಪ್ರತಿಜ್ಞೆ ಮಾಡುತ್ತೀರೆಂದು ನನಗೆ ಆಗಲೆ ತಿಳಿದಿದ್ದರೆ, ಆತನೊಡನೆ ವೈರ ಬೆಳಸುವ ಹವ್ಯಾಸಕ್ಕೆ ನಾನು ಬೀಳುತ್ತಿದ್ದಿಲ್ಲ."

"ನನ್ನ ಪ್ರತಿಜ್ಞೆಗೆ ಕಾಲತ್ರಯದಲ್ಲಿಯೂ ಭಂಗಬರಲಾರದು." ಎಂದು ನಾರಾಯಣದೇವನು ಒಳ್ಳೇ ಆಧ್ಯತೆಯಿಂದ ನುಡಿದು:--"ನಿಮ್ಮ ಸೈನ್ಯವು ನಾಳೆಯೇ ಸಿದ್ಧ

ವಾಗುವದಾದರೆ ನಾನು ನಾಳೆಯೇ ಬಿಜಾಪುರದ ಮೇಲೆ ಸಾಗಿಹೋಗುವೆನು."

"ನಾಳೆಯೇ ನೀವು ಹೊರಡಬೇಕೆಂದು ಇಚ್ಛಿಸುತ್ತಿದ್ದರೆ ಸೈನ್ಯವನ್ನು ಸಿದ್ಧಪಡಿಸುವದಕ್ಕೆ ವಿಲಂಬವಾಗಲಾರದು. ಸೇನಾಪತಿಯಾದರೂ ನಿಮ್ಮೊಡನೆ ಬರುವನು."

"ಯವನ ಬಾದಶಹನೆ, ಸೇನಾಪತಿಯು ನನ್ನೊಡನೆ ರಣರಂಗಕ್ಕೆ ಹೊರಡುವದಕ್ಕೆ ನಾನು ಅಡ್ಡಿಮಾಡಲಾರೆನು; ಆದರೆ ಆತನು ನನ್ನ ಹೊರತು ಯಾವ ಆಜ್ಞೆಯನ್ನೂ ಸೈನಿಕರಿಗೆ ಮಾಡಕೂಡದು. ಈ ಯುದ್ಧವು ಮುಗಿಯುವವರೆಗೂ ಆತನೊಬ್ಬ ಯೋಧನೆಂತಲೇ ಭಾವಿಸಲ್ಪಡುವನು."

ಈಗ ಮಾತ್ರ ಬಾದಶಹನು ಗೊಂದಲದಲ್ಲಿ ಬಿದ್ದನು. ಆಜ್ಞೆಯನ್ನು ಚಲಾಯಿಸುವ ಖಾನನ ಸ್ವಾತಂತ್ರ್ಯವನ್ನು ತೆಗೆದು ಒಂದು ವೀರನ ಕೈಯಲ್ಲಿ ಕೊಡುವದೆಂದರೆ, ಬಾದಶಾಹೀ ಸಿಂಹಾಸನಕ್ಕೆ ಅದೊಂದು ತೆರದ ಲಾಂಛನವೆಂದು ಅವನು ಭಾವಿಸಿದನು; ಆದರೂ ನಾರಾಯಣದೇವನ ಮನಸ್ಸನ್ನು ಮುರಿಯುವದು ಆತನಿಗೆ ಬೇಡವಾಗಿತ್ತು. ಸದ್ಯಕ್ಕೆ ಆತನ ಮನಸ್ಸನ್ನು ಸಮಾಧಾನಪಡಿಸಿ, ಹಿಂದಿನಿಂದ ಖಾನನನ್ನು ಹುರುಪುಗೊಳಿಸಬಹುದೆಂದು ಯೋಚಿಸಿ:—

"ಆಗಲಿ. ನಾರಾಯಣದೇವ, ನಿಮ್ಮ ಮಾತಿನಂತೆ ಮುಖ್ಯ ದಳವಾಯಿಯು ನೀವೇ ಆಗಿ, ಸೈನ್ಯಪಡೆಯ ಯೋಗ್ಯ ಶಿಸ್ತನ್ನು ನಿಮ್ಮ ಇಷ್ಟದಂತೆ ಬಳಸಿರಿ; ಆದರೆ ಅನೇಕ ಸಮರಗಳಲ್ಲಿ ವಿಜಯಿಯಾದ ಸಮರಪಟು ಝುಲಪೀಕರಖಾನನಂಥ ಅನುಭವಿಕನ ಸಲಹೆಯನ್ನು ನೀವು ಯಥಾಕಾಲದಲ್ಲಿ ತೆಗೆದುಕೊಳ್ಳುವದು ಅವಶ್ಯವಾಗಿರುವದು. ನೀವು ಮಾತ್ರ ನಿಷ್ಠೆಯಿಂದಲೂ ಸೇಡಿನಿಂದಲೂ ಯುದ್ಧವನ್ನು ಮಾಡತಕ್ಕದ್ದು." ಎಂದು ಬಾದಶಹನು ನುಡಿದನು. ಮಹಾಶಯ! ಬಾದಶಹನು ಹೀಗೆ ಅತ್ಯಂತ ಚಾಣಾಕ್ಷತೆಯಿಂದ ಮಾತನಾಡಿದ್ದರ ಭಾವವು ಆ ಹಿಂದೂವೀರನಿಗೆ ತಿಳಿದಿರಬಹುದೇನು?

---

## ಪವಿತ್ರಜ್ಯೋತಿಯ ಪಲಾಯನ.

—ooo—

ಆಲಂಗೀರನ ಸೈನ್ಯವು ಬಿಜಾಪುರದ ಸ್ವಾತಂತ್ರ್ಯ ಹರಣ ಮಾಡುವದಕ್ಕಾಗಿ ರಾಜಧಾನಿಯಿಂದ ಹೊರಟಿತು. ಬಾದಶಹನು ನಾರಾಯಣದೇವನೆದುರಿನಲ್ಲಿ ನುಡಿದಂತೆ ನಡೆದಿರಲಿಲ್ಲ. ನಾರಾಯಣದೇವನು ನಿಮಿತ್ತ ಮಾತ್ರ ದಳವಾಯಿಯಾಗಿದ್ದು, ಸೈನ್ಯದ ಸರ್ವಸೂತ್ರವೂ ಖಾನನ ವಶದಲ್ಲಿತ್ತು; ಆದರೆ ಆ ಹಿಂದೂ ದಳವಾಯಿಯ ಮಾತನ್ನು ಮುಖ್ಯತಃ ಅಲ್ಲಗಳೆಯಕೂಡದೆಂದು ಬಾದಶಹನು ಖಾನನಿಗೆ ಕಟ್ಟುನಿಟ್ಟಾಗಿ ತಿಳಿಸಿದ್ದನು. ಬಾದಶಾಹೀ ಸಿಂಹಾಸನಕ್ಕೆ ದೊರೆಯುವ ಯಾವುದೊಂದು ಲಾಭವನ್ನು ನಾರಾಯಣದೇವನು ಅನ್ಯಾಯವೆಂದು ತಡೆದಲ್ಲಿ ಖಾನನು ತನ್ನ ಇಚ್ಛೆಯಂತೆ ನಡೆಯಬಹುದಾಗಿದ್ದಿತು; ಆದರೆ ಖಾನನ ಆಲೋಚನೆಗಿಂತಲೂ ನಾರಾ

ಯಣದೇವನ ವಿಚಾರದಲ್ಲಿ ಹೆಚ್ಚು ಆದಾಯವಾಗುವಂತಿದ್ದರೆ, ಆಗ ಮಾತ್ರ ಖಾನನಿಗೆ ಆತನ ಮಾತನ್ನು ಮೀರಲಿಕ್ಕೆ ಬರುವಂತಿದ್ದಿಲ್ಲ.

ಬಿಜಾಪುರಕ್ಕೆ ಹೊರಡುವ ಮೊದಲು ಸಂಗ್ರಾಮದ ಸಮಾಚಾರವನ್ನು ಸುಲ್ತಾನನಿಗೆ ತಿಳಿಸುವಂತೆ ನಾರಾಯಣದೇವನು ಖಾನನಿಗೆ ಸೂಚಿಸಿದನು; ಆದರೆ ಖಾನನು ಆತನ ಮಾತನ್ನು ಬೀಳುಗಳೆದನು. ಖಾನನ ಈ ವಿಧವಾದ ಔದ್ಧತ್ಯವನ್ನು ನಾರಾಯಣದೇವನು ಬಾದಶಹನಿಗೆ ತಿಳಿಸಲು, ಆತನು ಖಾನನ ಮಾತನ್ನು ಪುಷ್ಟೀಕರಿಸಿ "ಶತ್ರುವಿಗೆ ಸಮರಸಿದ್ಧನಾಗಬೇಕೆಂದು ಸೂಚಿಸುವುದು ತಿಳಿಗೇಡಿತನವೆಂವೂ, ಹಾಗೆ ಸೂಚನೆ ಕೊಡುವದರಿಂದ ಶತ್ರುವು ಮಾರ್ಗಮಧ್ಯದಲ್ಲಿಯೇ ಆಹಾರ-ವಿಹಾರಕ್ಕೆ ತೊಂದರೆಯನ್ನೊಡ್ಡಿ, ತಮ್ಮನ್ನು ಹಣ್ಣಿಗೆ ತರುಬಹುದಾದ್ದರಿಂದ ಗುಪ್ತವಾಗಿಯೇ ಹೋಗಬೇಕೆಂದೂ" ಬಾದಶಹನು ನುಡಿದನು.

ದಾರಿಯಲ್ಲಿ ಸಿಕ್ಕ ಊರು-ಕೇರಿಗಳನ್ನು ಕೊಳ್ಳೆಹೊಡೆಯುತ್ತಾ ಆ ಯವನ ಸೈನ್ಯವು ಬಿಜಾಪುರದ ವರೆಗೆ ಸಾಗಿಹೋಯಿತು. ರಾತ್ರಿವೇಳೆಯಲ್ಲಿ ಸಾವಿರಾರು ಪಂಜುಗಳು ಕಾಣತೊಡಗಿದ್ದನ್ನು ನೋಡಿ ಬಿಜಾಪುರದ ಕೋಟೆಯ ಬುರಜಿನಲ್ಲಿದ್ದ ಸೈನಿಕರು ಗಾಬರಿಗೊಂಡರು. ಅವರು ತಮ್ಮ ಯಜಮಾನನಿಗೆ ತಮ್ಮ ಗಾಬರಿಯ ಕಾರಣವನ್ನು ತಿಳಿಸಲು, ಅವನು ವಸ್ತುಸ್ಥಿತಿಯನ್ನು ತಿಳಿಯುವದಕ್ಕೆ ಕೆಲವು ಜನ ಅನುಚರರನ್ನು ಗುಪ್ತವಾದ ಮಾರ್ಗದಿಂದ ಕಳುಹಿಸಿದನು.

ಬೆಳಗುಮುಂಜಾನೆಯಲ್ಲಿ ಎಲ್ಲ ವಿಷಯವು ಸುಲ್ತಾನನವರೆಗೂ ಹೋಯಿತು. ಈ ಆಕಸ್ಮಿಕ ಘಟನೆಯಿಂದ ಅವನಿಗೆ ಏನೊಂದು ಹೊಳೆಯದಿದ್ದರೂ, ತಕ್ಕಷ್ಟು ಸೇನಾಸಿದ್ಧತೆಯಿಂದ ಸಮರಕ್ಕಣಿಯಾದನು.

ಶಾಲಿವಾಹನ ಶಕೆ ೧೬೦೫ರಲ್ಲಿ ನಡೆದ ಈ ಘೋರ ಕದನವು ಇತಿಹಾಸಪ್ರಸಿದ್ಧವಾಗಿರುವದು. ಈ ಕದನಕ್ಕೆ ಕಾರಣವಾದ ವಿಷಯವಾವದೂ ಖಾನನಿಗೆ ಹೊಳೆಯದಿರಲಿಲ್ಲ. ರಮಣಿಯ ಮೇಲಿನ ಪ್ರೇಮದಿಂದ ಹಿಂದೂ ಲಲನೆಯನ್ನು ಭ್ರಷ್ಟಗೊಳಿಸಿದ ತನ್ನ ದುರ್ವರ್ತನವೇ ತನ್ನ ನಾಶಕ್ಕೆ ಕಾರಣವಾಯಿತೆಂದು ಅವನು ಅಲ್ಪಾವಕಾಶದಲ್ಲಿಯೇ ಮನಗಂಡನು.

ಸುಲ್ತಾನನು ಬಿಜಾಪುರದ ಘೋರ ಸಂಗ್ರಾಮದಲ್ಲಿ ತನ್ನ ಸರ್ವ ಸ್ವಾತಂತ್ರ್ಯವನ್ನು ಕಳಕೊಂಡು ಕೊನೆಗೆ ತನ್ನ ದೇಹವನ್ನು ಕೂಡ ವಿಸರ್ಜಿಸಿದನು. ಹೇರಳವಾದ ವೈಭವವು ನಾರಾಯಣದೇವನ ಅತುಲ ಸಾಹಸದಿಂದಲೂ ಖಾನನ ಯುದ್ಧ ಕುಶಲತೆಯಿಂದಲೂ ದೇಹಲೀ ಸಿಂಹಾಸನಕ್ಕೆ ದೊರೆಯಿತು. ಖಾನನು ಅಷ್ಟರಿಂದಲೇ ತೃಪ್ತನಾಗಲಿಲ್ಲ. ಅವನು ಸುಲ್ತಾನನ ಅಂತಃಪುರದ ಸ್ತ್ರೀಸಮುದಾಯವನ್ನು ದೇಹಲಿಗೆ ಸಾಗಿಸುವಂತೆ ತನ್ನ ಸೈನಿಕರಿಗೆ ಆಜ್ಞೆ ಮಾಡಿದನು.

ನಾರಾಯಣದೇವನು ಖಾನನ ಈ ಆಜ್ಞೆಯನ್ನು ಮನ್ನಿಸಕೂಡದೆಂದು ಸೈನಿಕರಿಗೆ ತಿಳುವಳಿಕೆ ಕೊಟ್ಟನು; ಆದರೆ ಅದು ಫಲಕಾರಿಯಾಗಲಿಲ್ಲ. ಇದರಿಂದ ಆತನು

ಬಹಳವಾಗಿ ವಿಷಾದಗೊಂಡನು. ಅವನು ಅಂತಃಪುರದ ಒಬ್ಬ ದಾಸಿಯನ್ನು ಕರೆದು, ತನ್ನ ಸಮಗ್ರ ಪರಿಚಯುವನ್ನೂ ಅವಳಿಗೆ ತಿಳಿಸಿ, ಖಾನನ ಆಜ್ಞೆಯನ್ನಾದರೂ ತಿಳಿಸಿದನು; ಮತ್ತು ಕುಲಸ್ತ್ರೀಯರಾರಾದರೂ ಅಂತಃಪುರದಲ್ಲಿದ್ದಲ್ಲಿ ತಮ್ಮ ಸತೀಧರ್ಮವನ್ನು ಕಾಪಾಡಿಕೊಳ್ಳುವ ಸಲುವಾಗಿ ತನ್ನ ಶಸ್ತ್ರಸಂಗ್ರಹದಲ್ಲಿನ ಉತ್ತಮೋತ್ತಮವಾದ ಆಯುಧಗಳನ್ನು ಆ ದಾಸಿಯ ಕೈಯಲ್ಲಿ ಕೊಟ್ಟು:-"ಹೋಗು. ಪರಪುರುಷನ ಜೀವವನ್ನು ಹಿಂಡಿಯಾಗಲಿ, ತಮ್ಮ ಜೀವನವನ್ನು ತೃಣವೆಂದು ಬಗೆದು ದೇಹತ್ಯಾಗ ಮಾಡುವದರಿಂದಾಗಲಿ ತಮ್ಮ ಶೀಲವನ್ನು ಕಾಯ್ದುಕೊಳ್ಳುವಂತಿದ್ದರೆ ಅಂಥ ಸಮಯದಲ್ಲಿ ಇದರ ಉಪಯೋಗವನ್ನು ಪಡೆಯಬೇಕೆಂದು ಹೇಳಿ, ಈ ಅಸ್ತ್ರಗಳನ್ನು ನಿಮ್ಮ ಝನಾನೆಯ ಸುಚರಿತೆಯರಿಗೆ ಕೊಡು" ಎಂದಂದು ದಾಸಿಯನ್ನು ಕಳುಹಿಸಿದನು.

ಮರುದಿನ ಸುಲ್ತಾನನ ಝನಾನೆಯು ದೇಹಲೀ ಯಾತ್ರೆಗೆ ಹೊರಟಿತು. ಅವರು ಪಯಣದ ಮೇಲೆ ಪಯಣಮಾಡುತ್ತ ದೇಹಲಿಗೆ ಸುಮಾರು ಇಪ್ಪತ್ತು ಮೈಲು ದೂರದಲ್ಲಿ ಬೀಡುಬಿಟ್ಟರು. ಸುದೀರ್ಘ ಪ್ರವಾಸದಿಂದ ಬಳಲಿದ ಸೈನಿಕರು ವಿಶ್ರಾಂತಿಸುಖಕ್ಕಾಗಿ ಅಲ್ಲಿ ತಳವೂರಿದ್ದರು. ಯುದ್ಧದ ವಿಜಯಾನಂದದಿಂದಿದ್ದ ಆ ಯವನ ಸೈನಿಕರಿಗೆ ಅಲ್ಲಿನ ವಸತಿಯು ವಾತಾವರಣವು ಆನಂದವೂ ಸುಖವೂ ಆಗಿದ್ದುದರಿಂದ, ಮತ್ತೆರಡು ದಿನ ಅಲ್ಲಿಯೇ ನಿಲ್ಲಬೇಕೆಂದು ಅವರು ಸೇನಾಪತಿಯನ್ನು ಒತ್ತಾಯಪಡಿಸತೊಡಗಿದರು. ಖಾನನಾದರೂ ಆ ಶುಕ್ಲಪಕ್ಷದ ಉತ್ತರ ತಿಥಿಗಳನ್ನು ತಮ್ಮ ವಸತಿಯಲ್ಲಿಯೇ ಆನಂದದಿಂದ ಕಳೆಯಬಹುದೆಂದು ಊಹಿಸಿ ಸೈನಿಕರ ಅಭಿಲಾಷೆಗೆ ಒಪ್ಪಿಗೆಯಿತ್ತನು.

ಹುಣ್ಣಿಮೆಯ ಚಂದ್ರಮನು ತನ್ನ ಶೀತಲವಾದ ಕದಿರುಗಳನ್ನು ಉಚ್ಚ-ನೀಚಗಳ ಪರಿಗಣಿಯಿಲ್ಲದೆ ಸರ್ವತ್ರ ವ್ಯಾಪಿಸಿದ್ದನು. ಮಾಲ್ಯಸುಗಂಧವು ವನಿತಾಸಕ್ತರ ಆನಂದಕ್ಕೆ ನ್ಯತ್ಯಯಬಾರದಂತೆ ಗಂಧವಹನು ಒಳ್ಳೇ ಎಚ್ಚರ ವಹಿಸಿದ್ದನು. ಶಿಶಿರಋತುವು ಕಳೆದು ವಸಂತಮಾಸವು ಪ್ರಾರಂಭವಾದುದರಿಂದ, ಗಿಡ-ಮರಗಳಿಗೆ ಯೌವನ ಬರತೊಡಗಿತ್ತು. ಕೋಗಿಲೆಗಳು ಪಂಚಮಗಾನದಿಂದ ವಸಂತನ ಬರುವಿಕೆಗಾಗಿ ಸ್ವಾಗತ ಬಯಸುತ್ತಿದ್ದವು.

ಮಧ್ಯರಾತ್ರಿಯು ಮೀರಿತ್ತು. ಖಾನನು ತನ್ನ ಶಿಬಿರದಲ್ಲಿ ಸುಪ್ಪತ್ತಿಗೆಯ ಮೇಲೆ ಅಡ್ಡಾಗಿದ್ದನು. ಅವನಿಗೆ ನಿದ್ರೆಯು ಹತ್ತಿದ್ದಿಲ್ಲ. ಅಂತಃಪುರದ ಕಾಮಿನಿಯರನ್ನು ನೋಡುವ ಲವಲವಿಕೆಯಿಂದ ಅವನು ಚಡಪಡಿಸತೊಡಗಿದ್ದನು. ತನ್ನ ಕಾರ್ಯಕ್ಕೆ ಆ ಮಧ್ಯರಾತ್ರಿಯು ಮೀರಿದ್ದನ್ನು ನೋಡಿ ಅವನು ಸಂಭ್ರಮಗೊಂಡನು. ಕೂಡಲೆ ಅವನು ಚಿತ್ತಾಕರ್ಷಕವಾದ ಉಡಿಗೆ-ತೊಡಿಗೆಗಳನ್ನು ಧರಿಸಿ ಅಂತಃಶಿಬಿರದಿಂದ ಹೊರಬಿದ್ದು ನಡೆದನು.

ಖಾನನು ಶಿಬಿರದಿಂದ ಹೊರಬಿದ್ದು ಹೆಚ್ಚು ದೂರ ನಡೆದಿದ್ದಿಲ್ಲ. ಅಷ್ಟರಲ್ಲಿಯೇ ಅವನಿಗೆ ತನ್ನ ಬಲಭಾಗದ ಪುಷ್ಕರಣಿಯ ಕಡೆಯಿಂದ ಪಿಳ್ಳಂಗೋವಿಯ ಇಂಚರವು

ಕರ್ಣಮಧುರವಾಗಿ ಕೇಳಹತ್ತಿತು. ಖಾನನು ಕ್ಷಣಕಾಲ ನಿಂತು ಆಲಿಸಿದನು. ಅದು ಕೊಳಲುಲಿಯಾಗಿದ್ದಿಲ್ಲ. ಯಾವಳೊಬ್ಬ ಸುಂದರಿಯ ಕಂಠದಿಂದ ಹೊರಡುವ 'ನನನನನನ' ಎಂಬ ಗತ್ತಿನ ಹಾಡಿಕೆಯಾಗಿತ್ತು. ಕೂಡಲೆ ಖಾನನು ಅತ್ತ ಕಡೆಗೆ ನಡೆದನು. ಪುಷ್ಕರಣಿಯ ದಂಡೆಯಲ್ಲಿ ಕುಳಿತ ಆ ಕೋಮಲತನುಧಾರಿಯನ್ನು ನೋಡಿ ಖಾನನು ಅಚ್ಚರಿಗೊಂಡನು. ಅವನು ಆ ಲಲನೆಯನ್ನು ಕುರಿತು:-"ಮಧುರಭಾಷಿಣಿ! ನಿನ್ನನ್ನು ನೋಡಿದರೆ ಅಪ್ಸರಾಂಗನೆಯಂತೆ ತೋರುವೆ. ನೀನು ಸುಲ್ತಾನನ ಮಡದಿಯಾಗಿರಬೇಕೆಂದು ನನ್ನ ಅನುಮಾನವಿದೆ. ನೀನು ಬಾದಶಹನ ಮಡದಿಯಾದರೆ, ಆತನ ಪಟ್ಟಮಹಿಷಿಯರ ಸೇವೆ ಮಾಡಬೇಕಾಗುವದು. ನೀನು ನನ್ನ ಪತ್ನಿಯಾಗುವದಾದರೆ ಹಿಂದಿನ ನಿನ್ನ ಸುಖಕ್ಕಿಂತ ಸಾವಿರ ಪಾಲು ಸುಖಿಯಾಗುವೆ. ಬಾದಶಹನಿಗಿಂತಲೂ ನಾನು ಯಾವ ವಿಚಾರದಲ್ಲಿಯೂ ಕಡಿಮೆಯಾಗಿರುವದಿಲ್ಲ. ನಾನು ಬಾದಶಹನ ಪ್ರತಿಬಿಂಬವೆಂದು ತಿಳಿ."

"ಓಹೊ! ಬಾದಶಹನ ಪ್ರತಿಬಿಂಬವೆ?"

ಅಂಥ ಅಪರಾತ್ರಿಯಲ್ಲಿ ಯಮನಂತೆ ತನ್ನೆದುರಿನಲ್ಲಿ ಬಂದು ನಿಂತ ಯವನ ಯುವಕನನ್ನು ನೋಡಿ ಆ ತರುಣಿಯು ಗಾಬರಿಗೊಂಡಳು. ಮರುಕ್ಷಣದಲ್ಲಿಯೆ ತನ್ನ ಖಡ್ಗದ ಕಡೆಗೆ ಆವಳ ದೃಷ್ಟಿಯು ಹೊರಳಲು ಅವಳು ಸಂತಸಬಟ್ಟಳು. ಏಕಾಂಗಿಯಾದ ತನ್ನೆದುರಿಗೆ ಅವೇಳೆಯಲ್ಲಿ ಬಂದು ನಿಂತ ಆ ಆಗಂತುಕನನ್ನು ಆ ಯುವತಿಯು ತಿರಸ್ಕಾರ ದೃಷ್ಟಿಯಿಂದ ಮೇಲಿನಂತೆ ಸಂಬೋಧಿಸುತ್ತಿರಲು, "ಅಪ್ಸರಾಂಗನೆ, ಧೈರ್ಯ ಸ್ಥೈರ್ಯಗಳಿಂದ ನಾನು ಬಾದಶಹನ ಪ್ರತಿಬಿಂಬವೆಂದು ಹೇಳಿದನೇ ವಿನಾ ನನ್ನ ನಾಮವು 'ಬಾದಶಹನ ಪ್ರತಿಬಿಂಬ'ವೆಂದಿರುವದಿಲ್ಲ. ನಾನು ಬಾದಶಹನ ಮುಖ್ಯ ದಳವಾಯಿಯಾದ ಝುಲಪಿಕರಖಾನ ಸೇನಾಪತಿಯು." ಎಂದು ನುಡಿದನು.

"ಖಾನಸಾಹೇಬರೇ, ಅಪ್ಸರಾಂಗನೆಯರು ಮಾನವರಿಗೆ ದುರ್ಲಭವೆಂದು ತಿಳಿದು ತಾವು ಹಿಂದಿರುಗಿರಿ."

"ಹೃದಯಪ್ರೇಮಿಕೆ! ನಾನು ನಿನ್ನನ್ನು ಬಿಟ್ಟು ಹಿಂದಿರುಗಲಾರೆನು. ನೀನೂ ನನ್ನೊಡನೆ ಬರುವೆಯಾದರೆ ನೀನಂದಂತೆ ನಡೆಯಲಿಕ್ಕೆ ಸಿದ್ಧನಿರುವೆನು."

"ನೀವು ನಾನಂದಂತೆ ಕೇಳುವಿರಾದರೆ ನಿಮ್ಮೊಡನೆ ಬರಲು ಅಡ್ಡಿಯಿಲ್ಲ."

"ಹೇಳು. ದೇವಾಂಗನೆ, ಬೇಗನೆ ಹೇಳು. ನಿನ್ನ ಮನಸ್ಸಿನಲ್ಲೇನಿದೆ? ಅದನ್ನು ತವಕದಿಂದ ತಿಳಿಸು" ಖಾನನು ಉನ್ಮತ್ತತನದಿಂದಲೂ ಆತುರದಿಂದಲೂ ಹೇಳಿದನು.

"ನೀವು ನನ್ನನ್ನು ಒಡಹುಟ್ಟಿದ ತಂಗಿಯೆಂದು ತಿಳಿಯಿರಿ."

ಖಾನನು ಜೋರೆಂದು ಇಳಿದು ಹೋದನು. ತನ್ನ ಸೌಮ್ಯವಾದ ಮಾತುಗಳೆಲ್ಲವೂ ನೀರಿನಲ್ಲಿ ಚಿತ್ರ ತೆಗೆದಂತೆ ವ್ಯರ್ಥವಾಗತೊಡಗಿದ್ದನ್ನು ನೋಡಿ ಅವನು ಕೋಪಗೊಂಡನು. ಅವನು ಒಳ್ಳೇ ಔದ್ಧತ್ಯತೆಯಿಂದಲೂ ದರ್ಪದಿಂದಲೂ ತನ್ನ ಮೀಸೆಯ ಮೇಲೆ ಕೈಯೆಳೆಯುತ್ತ:—"ಯುವತೀ, ನಿನ್ನಂಥ ಸಾವಿರಾರು ಜದ

ಸ್ತ್ರೀಯರ ಸುಖದಲ್ಲಿ ಮಗ್ನನಾಗಿದ್ದ ನನ್ನೆದುರಿನಲ್ಲಿ ನಿನ್ನ ಬಡಿವಾರದ ಮಾತನ್ನು ಹೇಳುವೆಯಾ?" ಎಂದವನೇ ಖಾನನು ಮುಂದೆ ನುಗ್ಗಿದನು.

"ಮೂರ್ಖಾ! ನಿನ್ನಂಥ ನಾಯಿಯು ನನ್ನಂಥ ವೀರಾಂಗನೆಯರ ಸತೀತ್ವಕ್ಕೆ ಯಾವ ರೀತಿಯ ಭಂಗವನ್ನೂ ತರಲಾರದು." ಆ ತರುಣಿಯು ಹೀಗೆ ನುಡಿದವಳೇ, ತನ್ನ ಕೈಯಲ್ಲಿನ ತೀಕ್ಷ್ಣ ಶಸ್ತ್ರವನ್ನು ತನ್ನ ಕೋಮಲ ಹೃದಯದೊಳಕ್ಕೆ ನುಗ್ಗಿಸಿದಳು. ಉತ್ತರಕ್ಷಣದಲ್ಲಿಯೇ ಒಂದು ಭವ್ಯವ್ಯಕ್ತಿಯು ಓಡುತ್ತ ಓಡುತ್ತ ಬಂದು 'ನೀಚಸೇನಾಪತಿ! ಜೀವನದ ಮೇಲೆ ಆಶೆಯಿರುವದಾದರೆ ಬಂದ ದಾರಿಯಿಂದ ನಡೆ" ಎಂದಂದನು. ಖಾನನು ಆ ಆಗಂತುಕ ವ್ಯಕ್ತಿಯನ್ನು ಆ ಚಂದ್ರಪ್ರಕಾಶದಲ್ಲಿ ಗುರುತಿಸಿದನು. ದಳವಾಯಿ ನಾರಾಯಣದೇವನ ಉಗ್ರಮೂರ್ತಿಯನ್ನು ನೋಡಿ ಖಾನನ ಎದೆಯೊಡೆದು ನೀರಾಯಿತು. ಅವನು ನಾಚಿಕೆಯಿಂದಲೂ ಅಂಜಿಕೆಯಿಂದಲೂ ತನ್ನ ಶಿಬಿರದ ಕಡೆಗೆ ನಡೆದನು.

ನಾರಾಯಣದೇವನು ಮುಂದೆ ನಡೆದನು. ಒಂದು ವಟವೃಕ್ಷದ ಆಶ್ರಯದಲ್ಲಿ ಆ ಯುವತಿಯು ಬಿದ್ದಿದ್ದಳು. ಅವಳ ಹೃದಯದಲ್ಲಿ ನೆಟ್ಟಿದ್ದ ಕತ್ತಿಯನ್ನು ತೆಗೆಯುತ್ತಿರಲು, ತರುಣಿಯು ನಾರಾಯಣದೇವನ ಗುರುತು ಹಿಡಿದು "ಬನ್ನಿರಿ, ನಾರಾಯಣದೇವ, ಹೀಗೆ ಬನ್ನಿರಿ. ನನ್ನ ಏಕನಿಷ್ಠೆಯ ಘೋರ ತಪಸ್ಸಿನ ಫಲವು ಇಂದು ಸಾರ್ಥಕವಾಯಿತು. ಮರಣಮುಖದಲ್ಲಿರುವಾಗ ತಮ್ಮ ದರ್ಶನವಾಗುವದೆಂದರೆ, ಅದೊಂದು ದೊಡ್ಡ ಯೋಗವೇ ಸರಿ. ಬನ್ನಿರಿ, ಹೀಗೆ ಬನ್ನಿರಿ. ನಿಮ್ಮ ತೊಡೆಯ ಮೇಲೆ ನನ್ನ ತಲೆಯನ್ನಿಟ್ಟು ಕ್ಷಣಕಾಲ ವಿಶ್ರಾಂತಿ ಹೊಂದುವೆನು. ಏಕೆ ನಾರಾಯಣದೇವ, ದೂರ ನಿಂತಿರಲ್ಲ? ಮೃತ್ಯುಶಯ್ಯೆಯಲ್ಲಿ ಮಲಗಿರುವ ಈ ಅಭಾಗಿನಿಯನ್ನು ಆತ್ಮೀಯ ಭಾವನೆಯಿಂದ ನೋಡಿರಿ; ಕರುಣಿಸಿರಿ. ನಿಮ್ಮ ಚರಣರಜವನ್ನೊಮ್ಮೆ ಈ ಪಾಪೀ ಸ್ತ್ರೀಜನ್ಮಕ್ಕೆ ಕರುಣಿಸಿರಿ. ನಾರಾಯಣದೇವ, ಸಾಯುತ್ತಿರುವ ಈ ರಮಣಿಯ ಅಲ್ಪ ಬಯಕೆಯನ್ನು ನೆರವೇರಿಸಿರಿ. ನನ್ನ ಪ್ರಮಾದವಶದಿಂದುಂಟಾದ ತಪ್ಪುಗಳೇನಾದರೂ ಇದ್ದರೆ ಕ್ಷಮಿಸಿರಿ." ವಟವೃಕ್ಷದ ದಟ್ಟವಾದ ನೆರಳಲ್ಲಿ ಬಿದ್ದಿದ್ದ ಆ ತರುಣಿಯ ಗುರುತು ನಾರಾಯಣದೇವನಿಗೆ ಹತ್ತಲಿಲ್ಲ. ತರುಣಿಯು ಮಾತ್ರ ತನ್ನ ನಾಮವನ್ನು ಸಂಬೋಧಿಸಿ ಹುಚ್ಚಳಂತೆ ಬಡಬಡಿಸುವದನ್ನು ನೋಡಿ ನಾರಾಯಣದೇವನು ಸೋಜಿಗಗೊಂಡನು. ತರುಣಿಯು ತನ್ನ ವಿಷಯದಲ್ಲಿ ಸಹಾನುಭೂತಿಯನ್ನು ವ್ಯಕ್ತಪಡಿಸುವದಕ್ಕಾಗಿ ಹೀಗೆ ಬಡಬಡಿಸುವಳೆಂದು ಅವನು ತರ್ಕಿಸಿದನು. ಅವನು ಆ ಅಪರಿಚಿತ ಪ್ರಮದೆಯನ್ನು ಕುರಿತು:—"ತರುಣೀ, ನಿನ್ನ ಮಾತಿನಿಂದ ನೀನು ಒಳ್ಳೇ ಕೃತಜ್ಞಮನಸ್ಕಳೆಂಬುದು ತಿಳಿಯಿತು. ನಾನು ತಂಪಾದ ವಾಯುಸೇವನೆಗಾಗಿ ಹೊರಭಾಗದಲ್ಲಿ ಸುತ್ತುತ್ತಿದ್ದೆನು; ಆದರೆ ಪುಷ್ಕರಣಿಯ ದಂಡೆಯಲ್ಲಿ ಸೇನಾಪತಿಯು ಮಾತನಾಡುತ್ತಿರುವಂತೆ ಭಾಸವಾಯಿತು. ಬರಬರುತ್ತ ಆ ಖಾನನ ಮಾತಿನಲ್ಲಿ ವಿರಸವುಂಟಾದ್ದನ್ನು ಕಂಡು ನಾನು ಇತ್ತ ಕಡೆಗೆ ಧಾವಿಸಿದೆನು. ಆಗ ಖಾನನು

ನಿನ್ನ ಪಾತಿವ್ರತ್ಯಭಂಗಮಾಡಲು ಸಜ್ಜಾಗಿದ್ದನು; ಆದರೆ ಅವನು ನನ್ನನ್ನು ನೋಡಿದೊಡನೆಯೇ ಹೊರಟು ಹೋದನು. ನಿನ್ನ ಹೊಟ್ಟೆಯಲ್ಲಿ ಮಾತ್ರ ಈ ಜಂಬಿಯವು ಹೊಕ್ಕಿದ್ದು, ನಾನು ಇದನ್ನು ಕಿತ್ತು ತೆಗೆದನು. ಇದರಲ್ಲಿ ನನ್ನ ತೊಡೆಯ ಮೇಲೆ ನಿನ್ನ ತಲೆಯಿಡುವದೆಂದರೇನು! ನಿನ್ನ ತಪ್ಪನ್ನು ಕ್ಷಮಿಸುವದೆಂದರೇನು! ಇದೆಲ್ಲವೂ ವಿಚಿತ್ರವೇ ಸರಿ; ಆದರೆ ತರುಣಿ, ಇಂಥ ದುರ್ಧರ ಪ್ರಸಂಗದಲ್ಲಿ ಆತ್ಮಘಾತಮಾಡಿಕೊಳ್ಳತಕ್ಕದಿದ್ದಿಲ್ಲ. ದೇವರು ನಿನ್ನನ್ನು ಒಂದಲ್ಲ ಒಂದು ವಿಧದಲ್ಲಿ ಕಾಪಾಡುತ್ತಿದ್ದನು.'' ಎಂದು ನುಡಿದು, "ಯುವತಿ, ನಿನ್ನ ಜನ್ಮಭೂಮಿಯಾವದು? ನಿನ್ನ ತಾಯಿ-ತಂದೆಗಳಾರು? ಈ ಪಿಶಾಚಿ ನರ್ತನದ ವೇಳೆಯಲ್ಲಿ ಏಕಾಂಗಿಯಾಗಿ ಈ ಪುಷ್ಕರಣಿಯ ದಂಡೆಯಲ್ಲಿ ಕುಳಿತ ನಿನ್ನ ಉದ್ದೇಶದ ರಹಸ್ಯವೇನು? ಇದೆಲ್ಲವನ್ನು ನನ್ನೆದುರಿನಲ್ಲಿ ಹೇಳುವಂತಿದ್ದರೆ ಹೇಳು."

''ನಾರಾಯಣದೇವ, ಇಷ್ಟರಲ್ಲಿಯೇ ನನ್ನನ್ನು ಮರೆತು ಬಿಟ್ಟಿರೇನು? ನಾನು ಯವನರ ಝನಾನೆಯಲ್ಲಿ ವಾಸವಾಗಿದ್ದ ಮಾತ್ರಕ್ಕೆ ನಿಮಗೆ ತಿರಸ್ಕರಣೀಯಳಾಗಿ ತೋರಿದೆನೇ ಹೇಗೆ? 'ಯದುಬಾಲೆ! ನಿನ್ನ ಗುಣಗಳು ಆದರ್ಶವಾಗಿರುವವು' ಎಂದು ಹೇಳಿದ್ದ ನಿಮ್ಮ ಸ್ತುತ್ಯಪರ ಮಾತುಗಳೆಲ್ಲವೂ ಈಗ ಮಾಯವಾದವೇನು?''

ಆ ತರಣಿಯ ಮಾತುಗಳನ್ನು ಕೇಳಿ ನಾರಾಯಣದೇವನು ವಿಸ್ಮಯಗೊಂಡನು. ಅವನು ಆ ಚಂದ್ರವದನೆಯನ್ನು ಒಂದು ಕ್ಷಣ ದಿಟ್ಟಿಸಿ ನೋಡಿದನು. ಕೂಡಲೆ ಅವನು ಎರಡು ಹೆಜ್ಜೆ ಹಿಂದಕ್ಕೆ ಸರಿದು:—

"ಪಿಶಾಚಿ! ಯದುಬಾಲೆ! ಯವನನ ಉಚ್ಛಿಷ್ಟವನ್ನು ತಿಂದ ವಚನಭ್ರಷ್ಟ ಯದುಬಾಲೆ! ನಿನ್ನ ಪಾಪೀ ಮುಖವನ್ನು ನೋಡುವದಕ್ಕಾಗಿ ದೈವವು ನನ್ನನ್ನು ಈ ಮಧ್ಯರಾತ್ರಿಯಲ್ಲಿಯೂ ಇಲ್ಲಿಯ ವರೆಗೆ ಎಳೆದುಕೊಂಡು ಬಂದಿರಬಹುದೇನು? ಪಾತಿವ್ರತ್ಯದ ಸೋಗಿನಿಂದ ನನ್ನ ಮುಖದ ಮೇಲೆ ಕೈ ಎಳೆಯುತ್ತಿದ್ದ ನಿನ್ನ ಗುಣಗಳ ಆದರ್ಶವನ್ನು ಅದೆಷ್ಟೆಂದು ವರ್ಣಿಸಬೇಕು? ಎಲೌ ಪುರುಷ ಘಾತುಕ ಸ್ತ್ರೀಯೇ, ನಿನಗಾಗಿ ಒಂದು ವಿಶೇಷತರದ ನರಕವು ಸೃಜಿಸಲ್ಪಟ್ಟಿದೆ. ಅಲ್ಲಿಗೆ ಹೊರಡುವದಕ್ಕೆ ಬೇಗನೆ ಸಿದ್ಧಳಾಗು."

ನಾರಾಯಣದೇವನ ಮಾತುಗಳನ್ನು ಕೇಳಿ ಯುವತಿಯು ಕಣ್ತುಂಬ ನೀರು ತಂದಳು. ಅವಳು ಗದ್ಗದ ಸ್ವರದಿಂದ: "ನಾರಾಯಣದೇವ, ಈ ಯದುಕುಮಾರಿಯು ವಚನಭ್ರಷ್ಟಳೆಂದು ತಿಳಿಯಬೇಡಿರಿ. ಅಪ್ಪನು ನನ್ನನ್ನು ಸುಲ್ತಾನನ ಝನಾನೆಗೆ ಸೇರಿಸಿದ್ದರೂ ನಾನು ನನ್ನ ದಾರಿಯನ್ನು ಬಿಟ್ಟಿರುವದಿಲ್ಲ.''

''ನೀನು ನಿನ್ನ ದಾರಿಯನ್ನು ಬಿಟ್ಟಿರುವದಿಲ್ಲವೆ? ನೀನು ಇಸ್ಮಾಯಿಲನ ಪತ್ನಿಯಾಗಿದ್ದಿಲ್ಲವೆ? ನೀನು ಕುಲಘಾತಕಿ ಯದುಬಾಲೆಯಲ್ಲವೆ? ಹೇಳು, ಎಲ್ಲವನ್ನೂ ಬೇಗನೆ ಹೇಳು."

''ನಾರಾಯಣದೇವ, ಎಲ್ಲವನ್ನೂ ತಿಳಿಸುವೆನು. ನನ್ನ ಹೃದಯದಲ್ಲಿ ಹೆಚ್ಚಾಗಿ

ರಕ್ತಸ್ರಾವವಾಗದಂತೆ ಕೈಯಿಂದ ಒತ್ತಿ ಹಿಡಿಯಿರಿ; ಅಂದರೆ ನಾನು ಎಲ್ಲವನ್ನು ತಿಳಿಸುವಷ್ಟು ಕಾಲವಾದರೂ ಬದುಕಿದ್ದೇನು."

"ಎಲೌ, ನೀತಿಯ ಕೊಲೆ ಮಾಡಿದ ದುಷ್ಟ ಹೆಂಗಸೇ, ನನ್ನ ಪವಿತ್ರ ಹಸ್ತದಿಂದ ನಿನ್ನ ಪತಿತ ದೇಹವನ್ನು ಮುಟ್ಟಿಸಿ ನನ್ನನ್ನು ನರಕ ಕೂಪದಲ್ಲಿ ತಳ್ಳಬೇಕೆಂಬುವೆಯಾ? ಆಗಲಿ. ನಿನ್ನ ವಿಚಾರವನ್ನು ತಿಳಿಯುಕೊಳ್ಳುವ ಸಲುವಾಗಿ ನೀನಂದಂತೆ ನಡೆಯುವೆನು."

ನಾರಾಯಣದೇವನು ಹೋಗಿ ಯದುಬಾಲೆಯ ರಕ್ತಚಿಮ್ಮುತ್ತಿದ್ದ ಸ್ಥಳದಲ್ಲಿ ತನ್ನ ಕೈಗಳನ್ನು ಗಟ್ಟಿಯಾಗಿ ಒತ್ತಿಹಿಡಿದನು. ಬಳಿಕ ಯದುಬಾಲೆಯು ಹೇಳತೊಡಗಿದಳು: —

"ನಾರಾಯಣದೇವ, ಮಾಧವಿಯು ಹಿಂಸ್ರಪಶುವಿನ ಭಕ್ಷ್ಯಸ್ಥಾನಕ್ಕೆ ಗುರಿಯಾಗಿದ್ದಳೆಂದು ನಿಮಗೆ ಹೇಳಿದ್ದೆನಲ್ಲವೆ? ಅದು ತೀರ ಸುಳ್ಳು. ವೀರಪಾಲನು ಅಧಿಕಾರಲಾಲಸೆಯಿಂದ ಆವಳನ್ನು ವಿಜಾಪುರದ ಸುಲ್ತಾನನಿಗೆ ಧಾರೆಯೆರೆದಿದ್ದನು. ಅವಳು ಯವನನ ಅರ್ಧಾಂಗಿಯಾಗಿದ್ದರೂ, ಹಿಂದುಗಳ ವಿಷಯದಲ್ಲಿ ಅತ್ಯಂತ ಆದರಭಾವವುಳ್ಳವಳಾಗಿದ್ದಳು. ಒಮ್ಮೆ ಮಥುರೆಯ ದೇವಾಲಯವನ್ನು ಉಧ್ವಸ್ತಗೊಳಿಸುವದಕ್ಕೆ ಆಲಂಗೀರನ ಸೈನ್ಯವು ಹೊರಟಾಗ, ಮಾಧವಿಯೇ ಸೇನಾಧಿಪತ್ಯವನ್ನು ವಹಿಸಿ, ಆ ಯವನ ಸೈನ್ಯದ ಮೇಲೆ ಸಾಗಿಹೋಗಿದ್ದಳು; ಆದರೆ ಮಾಡುವದೇನು. ಸುಲ್ತಾನನು ಪರಾಜಿತನಾದ್ದರಿಂದ, ಅವಳು ನಿನ್ನೆಯ ದಿನ ಆತ್ಮಹತ್ಯ ಮಾಡಿಕೊಂಡಳು!"

"ಹಾಗಾದರೆ ನೀನು ಆ ಯವನನ ಅರ್ಧಾಂಗಿಯಾಗಿಲ್ಲವೆ?"

"ಖಂಡಿತವಾಗಿಯೂ ಇಲ್ಲ. ಅಂಥ ಕುಕಲ್ಪನೆಗೆ ತಮ್ಮ ಹೃದಯದಲ್ಲಿ ಇಂಬುಗೊಡಬೇಡಿರಿ. ನಾರಾಯಣದೇವ, ನನ್ನ ಗತಿಯು ಕುಂಠಿತವಾಗುತ್ತದೆ. ಇನ್ನು ಹೆಚ್ಚು ವಿಷಯವನ್ನು ತಿಳಿದುಕೊಳ್ಳಲಿಕ್ಕೆ ನೀವು ಸಮರ್ಥರಾಗಲಾರಿರಿ."

"ಹಾಗಾದರೆ ಅನ್ಯಾಯವಾಗಿ ಆ ಸುಲ್ತಾನನ ರಾಜ್ಯವನ್ನು ಬಾದಶಹನಿಗೆ ನಾನು ಒಪ್ಪಿಸಿ ಬಿಟ್ಟೆನಲ್ಲ! ಹಾಯ್! ಹಾಯ್! ಹಾವನ್ನು ಹೊಡೆದು ಹದ್ದಿಗೆ ಹಾಕಿದ ನನ್ನ ಕಾರ್ಯಕ್ಕೆ ಶತಶಃ ಧಿಃಕಾರವಿರಲಿ!"

"ನಾರಾಯಣದೇವ, ದುಃಖಿಸಬೇಡಿರಿ. ನೀರಿರುವ ಸ್ಥಳಕ್ಕೆ ನೀರು ಹೋಗುವದು; ಕಾಡುಪ್ರಾಣಿಗಳು ಕಾಡನ್ನು ಸೇರುವವು. ಹಾಗೆಯೇ ವೈಭವವು ವೈಭವದಲ್ಲಿಯೇ ಸೇರಿತೆಂದು ತಿಳಿದು ದುಃಖವನ್ನು ನುಂಗಿಕೊಳ್ಳಿರಿ."

"ಯದುಬಾಲೆ, ಹಾಗೆ ತಿಳಿಯುವದಕ್ಕೆ ಬರುವದಿಲ್ಲ. ಇದರಲ್ಲಿ ನನ್ನ ತಪ್ಪು ಸಂಪೂರ್ಣವಾಗಿದೆ ಎಂದು ಒಪ್ಪುವೆನು. ವೈಭವವು ಕಾಡುಪ್ರಾಣಿಯಂತೆ ಚಲನಶಕ್ತಿಯುಳ್ಳ ವಸ್ತುವಲ್ಲ. ಅಂದಮೇಲೆ ಅದು ವೈಭವವಿದ್ದಲ್ಲಿಯೇ ಸೇರಬೇಕೆಂದು

ಬಯಸುವದೂ ಇಲ್ಲ; ಸಾಹಸಪಡುವುದೂ ಇಲ್ಲ. ಅದು ವ್ಯಕ್ತಿಯ ಪ್ರಯತ್ನ ವನ್ನು ಹೊಂದಿಕೊಂಡಿರುತ್ತದೆ.”

ನಾರಾಯಣದೇವನು ಇಷ್ಟು ನುಡಿಯುವ ವೇಳೆಗೆ ಯದುಕುಮಾರಿಯ ಕಂಠ ವು ಕುಂಠಿತವಾಗಿತ್ತು. ಮುಂದೆ ಸ್ವಲ್ಪ ವೇಳೆಯಲ್ಲಿಯೇ ಅವಳ ಆತ್ಮಜ್ಯೋತಿಯು ನಂದಿಹೋಯಿತು!

ನಾರಾಯಣದೇವನು ಭಾವಘರ್ಷಣೆಯಾದವನಂತೆ ಅತ್ತಿತ್ತ ತಿರುಗಾಡಿದನು. ಅವನು ತನ್ನ ನಿಡಿದಾದ ಕತ್ತಿಯನ್ನು ಆ ವಟವೃಕ್ಷದ ಬುಡದಲ್ಲಿ ತುದಿಮೇಲಾಗಿ ಊರಿದನು; ಹಾಗು ಆ ಮರವನ್ನು ಹತ್ತಿ ಕ್ಷಣ ಕಾಲ ಉಲುಕಾಡದಂತೆ ಕುಳಿತನು. “ಹಾ! ಯದುಕುಮಾರಿ, ನಿನ್ನೊಡನೆ ನಾನೂ ಬಂದು, ನಿನ್ನ ಕ್ಷಮೆಯನ್ನು ಕೇಳು ವೆನು.” ಎಂದವನೇ, ಕೆಳಗೆ ಧುಮುಕಿದನು. ಕಣ್ಣುರೆಪ್ಪೆ ಹೊಡೆಯುವಷ್ಟರಲ್ಲಿಯೇ ಏನಾಯಿತೋ ಹೇಳಲಸಾಧ್ಯ. ಉತ್ತರಕ್ಷಣದಲ್ಲಿಯೇ ಆ ಖಡ್ಗವು ನಾರಾಯಣ ದೇವನ ಹೃದಯವನ್ನು ಹೊಕ್ಕು ಬೆನ್ನಲ್ಲಿ ಹೊರಟಿದ್ದಿತು. ಪಂಚಭೂತಾತ್ಮಕ ವಾದ ಆತನ ಶರೀರವು ಕ್ಷಣಕಾಲ ಹೊಯ್ದಾಡಿತು. ನಾರಾಯಣದೇವನ ಆತ್ಮವಾದ ರೂ ತನ್ನ ಪ್ರೇಮಿಕೆಯ ಸಂಗಡಲೇ ನಡೆಯಿತು!



ಈ ಘಟನೆಯು ನಡೆದು ಶತಕಾನು ಶತಕಗಳಾಗಿ ಹೋಗಿರುವವು. ನಾರಾ ಯಣದೇವನು ತನ್ನ ಹೃದಯ ಪ್ರೇಮಿಕೆಗಾಗಿ ತನ್ನ ಆತ್ಮವನ್ನು ತ್ಯಾಗ ಮಾಡಿದನು. ಅದು ಯವನ ಬಾದಶಹನ ಕಾಲವಾಯಿತು; ಸರ್ವತ್ರ ಯವನ ಸತ್ತೆಯು ನೆಲೆ ಗೊಂಡ ಸಮಯವಾಗಿತ್ತು. ಸಾಮಾಜಿಕ-ರಾಜಕೀಯ-ನೈತಿಕ ವಿಷಯದಲ್ಲಿ ಪಾರ ತಂತ್ರ್ಯದಿಂದ ಬಂಧಿಸಲ್ಪಟ್ಟ ವಿಷವೇಳೆಯಾಗಿತ್ತು! ಈಗಲಾದರೂ ಬ್ರಿಟಿಶಬಾದಶಹರ ಕಾಲವು. ಸರ್ವತ್ರ ಬ್ರಿಟಿಶ ಸಾಮ್ರಾಜ್ಯಶಾಹಿಯು ನೆಲೆಗೊಂಡ ಸಮಯವು. ಲಾರ್ಡ ಮೆಕಾಲೆಸಾಹೇಬರು ಪ್ರವಾದಿಯಂತೆ ಹೇಳಿದ ಭಾರತೀಯರ ಭವಿಷ್ಯವನ್ನು ವಿದ್ಯಾರ್ಥಿಗಳು ವಿಹಂಗಮ ನಿರೀಕ್ಷಣೆ ಮಾಡುತ್ತಿರುವ ಸುಸಮಯವು; ಆದರೂ ಪ್ರೇಮದ ವಿಷಯವು ಮಾತ್ರ ಮೊದಲಿಗಿಂತಲೂ ಒತ್ತರದ ಸ್ಥಿತಿಯಲ್ಲಿಯೇ ಇದೆ. ಸಾಮ್ರಾಜ್ಯ ಸತ್ತಾಧಾರಿಗಳಾದ ಅಷ್ಟನು ಎಡ್ವರ್ಡರು ತಮ್ಮ ಪ್ರಣಯಪಾತ್ರಳಿಗಾಗಿ ಪದಚ್ಯುತರಾದರು. ಇದು ಇಂಗ್ಲಂಡದ ವಿಷಯವಾಯಿತು. ಭಾರತವಿಷಯ ವಾದರೂ ಜಾರ್ಜ ಜಿವಾಜಿರಾವ ಸಿಂಧ್ಯರ ಮುಂದಿನ ಕಾರ್ಯಕ್ರಮವನ್ನು ನೋ ಡುತ್ತಾ, ಅಂದಿನ ಹಾಗು ಇಂದಿನ ಸ್ಥಿತಿ-ಗತಿಗಳನ್ನು ತುಲನಾತ್ಮಕ ದೃಷ್ಟಿಯಿಂದ ಅವ ಲೋಕಿಸುತ್ತಾ, ವಾಚಕರೂ ನಾವೂ ಕೂಡಿಯೇ ಸದ್ಗುರುವಿನ ಅಡಿದಾವರೆಗಳಿಗೆರ ಗೋಣ.

---

ಸಂಪೂರ್ಣ.

# ಅತ್ಯುತ್ತಮ

# ಹೊಸ ಪುಸ್ತಕಗಳು

೧) ಪಾಣಿಗ್ರಹಣ ಪುಟ ೩೬ ನುಣುಪುಕಾಗದ
ಬೆಲೆ ೩ ಆ.

೨) ಅರುಣಕುಮಾರಿ ೨ ನೇ ಮುದ್ರಣ)
ಪುಟ ೨೦೦ ನುಣುಪು ಕಾಗದ
ಬೆಲೆ ೧ ರೂ.

೩) ಸೂರ್ಯಗ್ರಹಣ ! ೩ ನೇ ಆವೃತ್ತಿ]
ಪುಟ ೧೫೬ ಬೆಲೆ ೧೨ ಆಣೆ

೪ ಸಚಿತ್ರ ಶ್ರೀ ಮುರಘ ರಾಜೇಂದ್ರ ವಿಜಯ
ಅಥವಾ
ವೀರಶೈವ ಮತಾಬ್ಧಿ ಚಂದ್ರೋದಯ
ಅಂಟಿಕ್ ಪೇಪರ ಪುಟ ೧೫೨ ಬೆಲೆ ೧-೪-೦ ರೂ

ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ (ಹಾವೇರಿ)